*The Department of Public Instruction, Bombay*

# SECOND BOOK OF SANSKRIT

BY

Dr. RAMAKRISHNA GOPAL BHANDARKAR

TRANSLATED INTO KANARESE

BY

RAOJI BALAJI KARANDIKAR

FROM THE SEVENTH EDITION OF THE ORIGINAL



PUBLISHED BY THE
BASEL MISSION BOOK AND TRACT DEPOSITORY
MANGALORE
1931



Price: Re. 1-5-6

*The Department of Public Instruction, Bombay*

# SECOND BOOK OF SANSKRIT

BY

Dr. RAMAKRISHNA GOPAL BHANDARKAR

TRANSLATED INTO KANARESE

BY

RAOJI BALAJI KARANDIKAR

FROM THE SEVENTH EDITION OF THE ORIGINAL

Sixth Edition—2,500 Copies



PUBLISHED BY THE
BASEL MISSION BOOK AND TRACT DEPOSITORY
MANGALORE
1931



**Price: Re. 1-5-6**

ಮುಂಬಯಿ ಇಲಾಖೆಯೊಳಗಿನ ಸರಕಾರೀ ವಿದ್ಯಾಖಾತೆ

# ಸಂಸ್ಕೃತ

# ಎರಡನೇ ಪುಸ್ತಕವು


ಡಾಕ್ತರ ರಾಮಕೃಷ್ಣ ಗೋಪಾಳ ಭಾಂಡಾರಕರ

ಎಂಬವರು ರಚಿಸಿದ್ದರ ಏಳನೇ ಆವೃತ್ತಿಯಿಂದ

ರಾವಜೀ ಬಾಳಾಜಿ ಕರಂದೀಕರ

ಇವರು ಕನ್ನಡದಲ್ಲಿ ಭಾಷಾಂತರಿಸಿದ್ದು



ಆರನೇ ಆವೃತ್ತಿ—೨,೫೦೦ ಪ್ರತಿಗಳು




ಮಂಗಳೂರು

ಬಾಸೆಲ್ ಮಿಶ್ಶನ್ ಬುಕ್ ಅಂಡ್ ಟ್ರ್ಯಾಕ್ಟ್ ಡಿಪೊಜಿಟರಿ

೧೯೩೧





ಕ್ರಯ: ರೂ. ೧-೫-೬

# ಸಂಕ್ಷಿಪ್ತ ಪಾರಿಭಾಷಿಕ

(ಅ) ಅವ್ಯಯ.

(ಅ. ರೂ.) ಅತಿಶಯಾರ್ಥಕ ರೂಪ.

(ಆ.) ಆತ್ಮನೇಪದ.

(ಆ. ರೂ.) ಆಧಿಕ್ಯಾರ್ಥಕ ರೂಪ.

(ಉ. ಪು.) ಉತ್ತಮ ಪುರುಷ.

(ಉದಾ.) ಉದಾಹರಣೆ.

(ಉಭ.) ಉಭಯಪದ (ಪರಸ್ಮೈಪದ, ಆತ್ಮನೇಪದ).

(ಏ. ವ.) ಏಕವಚನ.

(ಕ.) ಕರ್ಮಣಿ ಅಥವಾ ಕರ್ಮಾರ್ಥಕ.

(ಕ. ಭೂ. ಕೃ.) ಅಥವಾ (ಭೂ. ಕೃ.) ಕರ್ಮಾರ್ಥಕ ಭೂತ ಕೃದಂತ.

(ಕ್ರಿ.) ಕ್ರಿಯಾಪದ.

(ಕ್ರಿ. ವಿ.) ಕ್ರಿಯಾವಿಶೇಷಣ.

(ಗ.) ಗಣ.

(ದ್ವಿ. ವ.) ದ್ವಿವಚನ.

(ಧಾ.) ಧಾತು.

(ನ.) ನಪುಂಸಕಲಿಂಗ.

(ನಾ.) ನಾಮ.

(ಪ.) ಪರಸ್ಮೈಪದ.

(ಪ್ರ. ಪು.) ಪ್ರಥಮ ಪುರುಷ.

(ಪು.) ಪುಲ್ಲಿಂಗ.

(ಬ. ವ.) ಬಹುವಚನ.

(ಭ. ಕೃ.) ಭವಿಷ್ಯತ್ ಕೃದ್ವಾಚಕ.

(ಮ. ಪು.) ಮಧ್ಯಮ ಪುರುಷ.

(ಮೂ. ರೂ.) ಮೂಲ ರೂಪ.

(ವ. ಕೃ.) ವರ್ತಮಾನ ಕೃದಂತ.

(ವಿ.) ವಿಶೇಷಣ.

(ಸ.) ಸರ್ವನಾಮ.

(ಸಪ್ತ.) ಸಪ್ತಮೀ.

(ಸಾ.) ಸಾಮಾನ್ಯಲಿಂಗ (ಪುಂಸ್ತ್ರೀ ನಪುಂಸಕ).

(ಸ್ತ್ರೀ.) ಸ್ತ್ರೀಲಿಂಗ.

# ಅನುಕ್ರಮಣಿಕೆ

## ಅಭ್ಯಾಸಕ್ಕಾಗಿ ಆರಿಸಿ ತೆಗೆದ ಪಾಠಗಳು.

# ಸಂಸ್ಕೃತ ಎರಡನೇ ಪುಸ್ತಕ

## ೧ನೇ ಪಾಠ.

### ೧ನೇ, ೪ನೇ, ೬ನೇ, ೧೦ನೇ ಗಣಗಳ ಅನಿಯಮಿತ ಧಾತುಗಳು.

೧. **गुप्** (ಪ.) ರಕ್ಷಿಸು, **धूप्** (ಪ.) ಕಾಸು, **पण्** (ಪ.) ಸ್ತುತಿಸು, **पन्** (ಪ.) ಸ್ತುತಿಸು, ಹೊಗಳು ಎಂಬ ಮೊದಲನೇ ಗಣದ ಧಾತುಗಳಿಗೂ, **विच्छ्** (ಪ.) ಹೋಗು, ಸಮೀಪಕ್ಕೆ ಹೋಗು, ಎಂಬ ೬ನೇ ಗಣದ ಧಾತುವಿಗೂ **अ** ವಿಕರಣ ಬರುವ ಪೂರ್ವದಲ್ಲಿ **आय्** ಆಗಮವಾಗುತ್ತದೆ. ಉದಾ: **पणायति**. **धूपायति** ಇತ್ಯಾದಿ. ಈ ಆಗಮದ ಹಿಂದಿನ **गुप्** ಧಾತುವಿನ ತಕಾರಕ್ಕೆ ಗುಣವಾಗುತ್ತದೆ. ಉದಾ: **गोपायति**. ಈ ಆಗಮವು ಈ ಧಾತುಗಳಿಗೆ ಸಾರ್ವಧಾತುಕ ಆಖ್ಯಾತಪ್ರತ್ಯಯಗಳು[1] ಹತ್ತುವ ಪೂರ್ವದಲ್ಲಿ ಬಂದೇ ಬರುವದು; ಆದರೆ ಉಳಿದ ಆಖ್ಯಾತಪ್ರತ್ಯಯಗಳು ಹತ್ತುವ ಪೂರ್ವದಲ್ಲಿ ವಿಕಲ್ಪದಿಂದ ಬರುವದು. ಆತ್ಮನೇಪದದಲ್ಲಿ **पण्**, **पन्** ಧಾತುಗಳಿಗೆ ಈ ಆಗಮವು ಬರುವದಿಲ್ಲ. ಉದಾ: **पणते**.

೨. **भ्राश्** (ಆ.), **भ्लाश्** (ಆ.), **भ्रम्** (ಪ.), **क्रम्** (ಪ.), **क्लम्** (ಪ.), **त्रस्** (ಪ.), **लष्** (ಪ.), **यस्** (ಪ.), **सम्+यस्** ಈ ಧಾತುಗಳು ೧ನೇ ಗಣದ ಧಾತುಗಳಂತೆಯೂ ೪ನೇ ಗಣದ ಧಾತುಗಳಂತೆಯೂ ನಡೆಯುತ್ತವೆ. **त्रुट्** (ಪ.), ೪ನೇ ಮತ್ತು ೬ನೇ ಗಣದ ಧಾತುಗಳಂತೆ ನಡೆಯುತ್ತದೆ. ಉದಾ: **भ्राशते** ಅಥವಾ **भ्राश्यते**.

೩. ಸಾರ್ವಧಾತುಕ ಪರಸ್ಮೈಪದ ಆಖ್ಯಾತಪ್ರತ್ಯಯಗಳನ್ನು ಹೊಂದುವ ಪೂರ್ವದಲ್ಲಿ **क्रम्** ಧಾತುವಿನ ಉಪಾಂತ್ಯ **अ**ಕಾರವು ದೀರ್ಘವಾಗುತ್ತದೆ. ಉದಾ: **क्रामति** ಅಥವಾ **क्राम्यति**; ಆದರೆ ಆತ್ಮನೇಪದದಲ್ಲಿ **आक्रमते**. ಇದರಂತೆ **ष्ठिव्**, **क्लम्** ಮತ್ತು **आ+चम्** (೧ನೇ ಗಣ) ಈ ಧಾತುಗಳ ಉಪಾಂತ್ಯ ಸ್ವರವು ದೀರ್ಘವಾಗುತ್ತದೆ.

---

1) ಸಾರ್ವಧಾತುಕ ಆಖ್ಯಾತಪ್ರತ್ಯಯಗಳು ಎಂಬ ಶಬ್ದದ ವ್ಯಾಖ್ಯೆಯನ್ನು ೨ನೇ ಪಾಠದಲ್ಲಿ ನೋಡಿಕೊಳ್ಳತಕ್ಕದ್ದು.

೪. ಸಾರ್ವಧಾತುಕ ಆಖ್ಯಾತಪ್ರತ್ಯಯಗಳನ್ನು ಹೊಂದುವಾಗ ೪ನೇ ಗಣದ **ष्ठिव्, शम्, तम्, श्रम्, मद्** ಧಾತುಗಳ ಉಪಾಂತ್ಯಸ್ವರವು ದೀರ್ಘವಾಗುತ್ತದೆ. **भ्रम्, क्षम्** ಧಾತುಗಳು ೪ನೇ ಗಣದಂತೆ ನಡೆಯುವಾಗ ಈ ನಿಯಮಕ್ಕೆ ಒಳಗಾಗುತ್ತವೆ. ಉದಾ: **ष्ठीव्यति, श्राम्यति**, **भ्राम्यति** ಅಥವಾ **भ्रमति**. **भ्रम्** ಧಾತುವಿನ ರೂಪವು **भ्रम्यति** ಎಂತಲೂ ಆಗುತ್ತದೆ.

೫. ಬೋಳಿಸು ಎಂಬ ನಿಜಾರ್ಥದ **अक्ष्**, **तक्ष्** ಧಾತುಗಳು ೧ನೇ ಮತ್ತು ೫ನೇ ಗಣದ ಧಾತುಗಳಂತೆ ನಡೆಯುತ್ತವೆ. ಉದಾ: **अक्षति** ಅಥವಾ **अक्ष्णोति**.

೬. **ध्मा** (ಗಾಳಿಯನ್ನು) ಬೀಸು, **घ्रा** ಮೂಸಿನೋಡು, **म्ना** ವಿಚಾರ ಮಾಡು, **ऋ** ಹೋಗು, **सृ** ಓಡು, **यम्** ನಿಯಮಿಸು, **शद्** ನಷ್ಟವಾಗು, ಈ ೧ನೇ ಗಣದ ಧಾತುಗಳು ಸಾರ್ವಧಾತುಕ ಆಖ್ಯಾತಪ್ರತ್ಯಯಗಳನ್ನು ಹೊಂದುವ ಪೂರ್ವದಲ್ಲಿ **धम्, जिघ्र्, मन्, ऋच्छ्, धौ, यच्छ्, शीय्** ಎಂಬ ರೂಪಾಂತರಗಳನ್ನು ಧರಿಸುತ್ತವೆ. ಉದಾ: **धमति**, **जिघ्रति** ಇತ್ಯಾದಿ. ಕಡೆಯ ಧಾತುವು ಆತ್ಮನೇಪದಪ್ರತ್ಯಯಗಳನ್ನು ಧರಿಸುವದು.

೭. ವಿಕರಣವನ್ನು ಹೊಂದುವಾಗಲೂ, ಸ್ವರಾದಿ ಸಬಲಪ್ರತ್ಯಯಗಳು ಪರವಾದಾಗಲೂ **गुह्** ಧಾತುವಿನ ಉಪಾಂತ್ಯ **उ**ಕಾರವು ದೀರ್ಘವಾಗುತ್ತದೆ. ಉದಾ: **गूहति**.

೮. ವಿಕರಣದ ಹಿಂದಿನ ಮೊದಲನೇ ಗಣದ **दंश्** (ಪ.), **सञ्ज्** (ಪ.), **स्वञ्ज्** (ಆ.), **रञ्ज्** (ಉಭ.), ಈ ಧಾತುಗಳ ಉಪಾಂತ್ಯ ಅನುನಾಸಿಕಕ್ಕೆ ಲೋಪ ಬರುತ್ತದೆ. ಉದಾ: **दशति**, **स्वजते** ಇತ್ಯಾದಿ.

೯. ಧಾತುವಿನ **ॠ**ಕಾರಕ್ಕೆ ಗುಣವಾಗಲಿ ವೃದ್ಧಿಯಾಗಲಿ ಆಗದಿದ್ದರೆ, ಅದಕ್ಕೆ **इर्** ಆದೇಶವೂ, ಆ ಧಾತುವಿನೊಳಗೆ **ॠ**ಕಾರದ ಪೂರ್ವದಲ್ಲಿ ಓಷ್ಠ್ಯವರ್ಣವಾಗಲಿ **व**ಕಾರವಾಗಲಿ ಇದ್ದರೆ, **उर्** ಆದೇಶವೂ ಆಗುತ್ತದೆ. ಈ **इ**, **उ**ಕಾರಗಳು, ವ್ಯಂಜನ ಪರವಾಗಲು, ದೀರ್ಘವಾಗುತ್ತವೆ. ಉದಾ: **जॄ** (೪ನೇ ಗಣ) ಧಾತುವಿನ ರೂಪವು **जीर्यति**, **कॄ** (೬ನೇ ಗಣ) ಧಾತುವಿನ ರೂಪವು **किरति**, **कॄत्** (೧೦ನೇ ಗಣ) ಧಾತುವಿನ ರೂಪವು **कीर्तयति** ಆಗುತ್ತದೆ.

೧೦. ೪ನೇ ಗಣದ **ओ**ಕಾರಾಂತ ಧಾತುಗಳ ಮುಂದೆ ವಿಕರಣ ಬಂದಾಗ **ओ**ಕಾರಕ್ಕೆ ಲೋಪ ಬರುತ್ತದೆ. ಉದಾ: **सो** ಧಾತು **स्यति** **दो** ಧಾತು **द्यति**, **शो** ಧಾತು **श्यति**, **छो** ಧಾತು **छ्यति**.

೧೧. **व्यध्** (೪ನೇ ಗಣ) ಧಾತುವಿನ ಮುಂದೆ ವಿಕರಣ ಬಂದಾಗ ರೂಪಾಂತರವಾಗಿ **विध्** ಆಗುತ್ತದೆ. ಉದಾ: **विध्यति**.

೧೨. ೬ನೇ ಗಣದ ವಿಕರಣವಾದ अ ದ ಹಿಂದಿನ इ, ಈಕಾರಾಂತ ಧಾತುಗಳ ಅಂತ್ಯಸ್ವರಕ್ಕೆ **इय्** ಆದೇಶವೂ, उ, ಊಕಾರಾಂತ ಧಾತುಗಳ ಅಂತ್ಯಸ್ವರಕ್ಕೆ **उव्** ಆದೇಶವೂ ಬರುತ್ತವೆ. (೬ನೇ ಪಾಠದ ಖ ನಿಯಮವನ್ನು ನೋಡು.) ಉದಾ: **रि** (ಧಾ.) **रियति**, **नू** (ಧಾ.) **नुवति**, **धू** (ಧಾ.) **धुवति**.

೧೩. ೬ನೇ ಗಣದ **भ्रस्ज्**, **व्रश्च्** ಧಾತುಗಳು ಸಾರ್ವಧಾತುಕ ಆಖ್ಯಾತ ಪ್ರತ್ಯಯಗಳು ಪರವಾಗಲು **भृज्ज्**, **वृश्च्** ಎಂಬ ರೂಪಾಂತರಗಳನ್ನು ಹೊಂದುತ್ತವೆ. ಉದಾ: **भृज्जति**, **वृश्चति**.

೧೪. **मस्ज्**, **सस्ज्** ಧಾತುಗಳ ಉಪಾಂತ್ಯ **स्** ಕಾರಕ್ಕೆ **ज्** ಕಾರಾದೇಶವಾಗುತ್ತದೆ. ಇಲ್ಲವೆ, ಅದಕ್ಕೆ ೯ನೇ ಪಾಠದ ಕ ನಿಯಮದಂತೆ ಲೋಪ ಬರುತ್ತದೆ.

೧೫. ಸಾರ್ವಧಾತುಕ ಆಖ್ಯಾತಪ್ರತ್ಯಯಗಳು ಪರವಾಗಲು **लुप्**, **लिप्**, **खिद्**, **कृत्**, **पिश्** ಈ ಆರನೇ ಗಣದ ಧಾತುಗಳ ಉಪಾಂತ್ಯದಲ್ಲಿ ಅನುಸ್ವಾರ ಆಗಮವಾಗುತ್ತದೆ. ಉದಾ: **लिम्पति**.

೧೬. **तन्त्र्**, **चित्**, **भर्त्स्**, **मन्त्र्**, **तर्ज्**, **विद्**, **दंश्** ಮುಂತಾದ ೧೦ನೇ ಗಣದ ಧಾತುಗಳು ಆತ್ಮನೇಪದಪ್ರತ್ಯಯಗಳನ್ನು ಮಾತ್ರ ಧರಿಸುತ್ತವೆ. ಉದಾ: **तन्त्रयते**, **चेतयते**.

೧೭. **युज्**, **पृच्**, **सह्**, **वृज्**, **वृ**, **जॄ**, **रिच्**, **तप्**, **तृप्**, **दृभ्**, **अर्ह्** ಮುಂತಾದ ಧಾತುಗಳು ೧ನೇ ಗಣದಂತೆಯೂ ೧೦ನೇ ಗಣದಂತೆಯೂ ನಡೆಯುತ್ತವೆ. ಉದಾ: **योजति**, **योजयति** ಇತ್ಯಾದಿ.

वैषम्यमपि प्राप्ता धैर्यधनाः साधव आत्मनः सच्चरणव्रतं गोपायन्ति ।

स्वजनवियोगेन व्यथितं मे मनो निष्ठाशून्यं भ्रमतीव ।

मार्गे वन्यानां कुसुमानामामोदमुपजिघ्रन्तौ तौ दम्पती ऋषेराश्रमम-गच्छताम् ।

अयं शीत आकाशवायुस्तव मुखे घर्मजान्स्वेदलवानाचामति ।

नदतः सिंहस्य स्वनं श्रुत्वा यथा सर्वे मृगास्त्रसन्ति तथैव भीमस्य शब्दं श्रुत्वा सर्वे योधा अत्रस्यन् ।

गगनमध्यमारूढस्य सवितुः प्रचण्डेन तापेन क्लान्तोऽयं शिखी तरोरालवाले स्थितं शीतमुदकं पर्याप्तमाचामति ।

निदाघेऽल्पैरपि तोयैर्मालाकारेण या तरोः पुष्टिर्विरच्यते सा किमन-ल्पान्यपि तोयानि विश्वतो विकिरता वारिदेन जनयितुं शक्या ।

**श्रोत्रियायाभ्यागताय वत्सतरीं महोक्षं महाजं वा निर्वपन्ति गृहमेधिनः । तं हि धर्मं धर्मसूत्रकाराः समामनन्ति ।**

**प्रत्युत्पन्नमतिः प्राप्तां क्रियां कर्तुं व्यवस्यति ॥**

**एतान्यनीकानि महानुभावं गूहन्ति मेघा इव रश्मिमन्तम् ॥**

**यावत् प्रतापनिधिराक्रमते[1] न भानुरह्नाय तावदरुणेन तमो निरस्तम् ॥**

**व्यतिषजति पदार्थानान्तरः कोऽपि हेतु-**
**र्न खलु बहिरुपाधीन्प्रीतयः संश्रयन्ते ॥**

**लिम्पतीव तमोऽङ्गानि वर्षतीवाञ्जनं नभः ।**
**असत्पुरुषसेवेव दृष्टिर्निष्फलतां गता ॥**

**त्वं तेनाभिहितः पथ्यं[2] किं कोपं न नियच्छसि ॥**

**[3]तद्विद्विषां जरति चेतसि भोगतृष्णा ।**
**तेषां वपूंषि विपिनेषु च जारयन्ति ॥**

**सहते शस्त्रसंपातं सहति श्रममाहवे ।**

---

1) ಸೂರ್ಯ ನಕ್ಷತ್ರ ಮೊದಲಾದವುಗಳ ಸಂಬಂಧದಿಂದ "ಉದಯಿಸು" ಎಂಬ ಅರ್ಥದ ಯೋಗವಿದ್ದಲ್ಲಿ **आ + क्रम्** ಧಾತುವು ಆತ್ಮನೇಪದಪ್ರತ್ಯಯಗಳನ್ನು ಧರಿಸುತ್ತದೆ.

2) **दुह्याच्पच्दण्ड्रुधिप्रच्छिचिब्रूशासुजिमथ्मुषां । कर्मयुक् स्यादकथितं तथा स्यान्नीहृकृष्वहाम् = दुह्, याच्, पच्, दण्ड्, रुध्, प्रच्छ्, चि, ब्रू, शास्, जि, मथ्, मुष्, नी, हृ, कृष्, वह्,** ಈ ೧೬ ಧಾತುಗಳಿಗೆ ಮತ್ತು ಇವುಗಳ ಅರ್ಥವನ್ನೇ ಹೇಳುವ ಬೇರೆ ಧಾತುಗಳಿಗೆ ಎರಡು ಕರ್ಮಗಳಿರುತ್ತವೆ. ಒಂದಕ್ಕೆ ಪ್ರಧಾನಕರ್ಮ, ಮತ್ತೊಂದಕ್ಕೆ ಗೌಣಕರ್ಮ ಅನ್ನುವರು. **दुह्** ಧಾತುವಿನಿಂದ **मुष्** ಧಾತುವಿನ ವರೆಗೆ ೧೨ ಧಾತುಗಳ ಮತ್ತು ಈ ಅರ್ಥದ ಬೇರೆ ಧಾತುಗಳ ಕರ್ಮಣಿಪ್ರಯೋಗದಲ್ಲಿ ಗೌಣಕರ್ಮವು ಪ್ರಥಮಾವಿಭಕ್ತಿಯನ್ನೂ ಪ್ರಧಾನಕರ್ಮವು ದ್ವಿತೀಯಾವಿಭಕ್ತಿಯನ್ನೂ ಧರಿಸುತ್ತವೆ. **(नी - वह्)** ಈ ಕಡೆಯ ನಾಲ್ಕು ಧಾತುಗಳ ಮತ್ತು ಆ ಅರ್ಥದ ಬೇರೆ ಧಾತುಗಳ ಕರ್ಮಾರ್ಥಕ ಯೋಗವಿದ್ದಲ್ಲಿ ಪ್ರಧಾನಕರ್ಮವು ಪ್ರಥಮಾವಿಭಕ್ತಿಯನ್ನೂ ಗೌಣಕರ್ಮವು ದ್ವಿತೀಯಾವಿಭಕ್ತಿಯನ್ನೂ ಧರಿಸುತ್ತವೆ. ಉದಾ: **बलिं याचते वसुधाम्** — ಭೂಮಿಯನ್ನು ಬಲಿರಾಜನನ್ನು ಬೇಡುತ್ತಾನೆ — ಕರ್ತರಿಪ್ರಯೋಗ; **बलिर्याच्यते वसुधाम्** ಕರ್ಮಾರ್ಥಕಪ್ರಯೋಗ; **शतं जयति देवदत्तम्** ದೇವದತ್ತನಿಂದ ನೂರು (ನಾಣ್ಯಗಳನ್ನು) ಗೆದ್ದುಕೊಳ್ಳುತ್ತಾನೆ (ಕರ್ತರಿ); **शतं जीयते देवदत्तः** (ಕರ್ಮಣಿ); **ग्राममजां नयति** (ಕರ್ತರಿಪ್ರಯೋಗ); **ग्राममजा नीयते** (ಕರ್ಮಣಿಪ್ರಯೋಗ).

ಅವತರಿಸಿದ ಪದ್ಯದಲ್ಲಿ **अभि + धा** ಧಾತುವು **ब्रू** (ಹೇಳು, ಅನ್ನು, ಮಾತಾಡು) ಧಾತುವಿನ ಅರ್ಥವನ್ನು ಹೇಳುತ್ತದೆ. **अभि + हित** ಇದು **अभि + धा** ಧಾತುವಿನ ಕರ್ಮಾರ್ಥಕ ಭೂತಕೃದಂತ ವಿಶೇಷಣವು.

3) ಈ ಹತ್ತು ಪದ್ಯಗಳು ಕೃಷ್ಣನೆಂಬ ಅರಸನ ವರ್ಣನಪರವಾದವು.

उत्साहयति तच्चित्तमपि जेतुं शचीपतिम् ॥
पूजामर्हति सर्वेषामृषीणामाश्रमेऽप्यसौ ।
अर्हयत्यर्घ्यसत्कारं मधुपर्कं च पावनम् ॥
न क्षाम्यति क्षितीशानामपराधलवानपि ।
अपराधसहस्राणि क्षमते यो द्विजन्मनाम् ॥
नाहिर्दंशयते कंचित्तद्देशे गरुडाज्ञया ।
यदि प्रमाददद्दशति तस्मिन्न क्रमते[1] विषम् ॥
न तर्जति रुषा कंचिन्नीचमप्युपकारिणम् ।
परं तर्जयते दुष्टान् समन्तात्संगतान्मिथः ॥
कोटिभिः पणते नित्यं राष्ट्रे तस्य वणिग्जनः ।
यक्षाश्चापि पणायन्ति तद्विभूतिं गृहेगृहे[2] ॥
सर्वोऽभिलषति श्रीमानिंद्रियार्थोपसेवनम् ।
अभिलष्यत्यसौ योगी तेभ्य एव निवर्तनम् ॥
लुम्पति प्रतिपक्षाणां स लक्ष्मीं बाणवृष्टिभिः ।
न लुप्यति मतिस्तस्य सकलेऽप्यर्थसंशये ॥
अर्जते धर्ममेवैकमर्थं धर्मार्थमर्जति ।
अर्जयत्यूर्जितांल्लोकान् स धर्मेणैव शाश्वतान् ।
सर्वस्य जायते मानः स्वहिताच्च प्रमाद्यति ।
वृद्धौ भजति चापथ्यं नरो येन विनश्यति ॥
भजन्ति विपदस्तूर्णमतिक्रामन्ति सम्पदः ।
तान्मदान्नावतिष्ठन्ते[3] ये मते न्यायवादिनाम् ॥
प्राज्ञास्तेजस्विनः सम्यक्पश्यन्ति च वदन्ति च ।

---

[1]) ಫಲಿಸು, ಪರಿಣಮಿಸು ಎಂಬ ಅರ್ಥದಲ್ಲಿ **क्रम्** ಧಾತುವು ಆತ್ಮನೇಪದಪ್ರತ್ಯಯಗಳನ್ನು ಧರಿಸುತ್ತದೆ.

[2]) ಎರಡಾವರ್ತಿ ನುಡಿದ ನಾಮಪದವು ಆ ವಸ್ತುಗಳಲ್ಲಿ ಒಂದೊಂದನ್ನು ವಿಂಗಡಿಸಿ ಹೇಳುತ್ತದೆ. ಉದಾ: **गृहेगृहे** ಮನೆಮನೆಯಲ್ಲಿ, **दिनेदिने** ದಿನದಿನದೊಳು.

[3]) **सम्, अव, प्र, वि** ಉಪಸರ್ಗಗಳ ಯೋಗವಿದ್ದಲ್ಲಿ **स्था** ಧಾತುವು ಆತ್ಮನೇಪದಪ್ರತ್ಯಯಗಳನ್ನು ಧರಿಸುತ್ತದೆ.

तेऽवज्ञाता महाराज क्लाम्यन्ति विरमन्ति[1] च ॥
जीर्यन्ति जीर्यतः केशा दन्ता जीर्यन्ति जीर्यतः ।
जीवनाशा धनाशा च जीर्यतोऽपि न जीर्यति ॥
अहो खलभुजङ्गस्य विचित्रोऽयं वधक्रमः ।
अन्यस्य दशति श्रोत्रमन्यः प्राणैर्वियुज्यते ॥
त्रिधौ विध्यति सक्रोधे वर्म धर्मः शरीरिणाम् ।
स एव केवलं तस्मादस्माकं जायतां गतिः ॥
विहितस्याननुष्ठानान्निन्दितस्य च सेवनात् ।
अनिग्रहाच्चेन्द्रियाणां नरः पतनमृच्छति ॥

ದೇವರ ಪ್ರಭಾವದಿಂದ ಈ ಜಗತ್ತೆಂಬ ಗಾಲಿಯು ತಿರುಗುತ್ತದೆ (**भ्रम्**).

ಅವನ ಕೃತಘ್ನತೆಗೆ ಸಿಟ್ಟಾಗಿ ಬಿರುನುಡಿಯಿಂದ ಅವನನ್ನು ತರಿದನು (**क्षम्** + **तक्ष्**).

ಆ ಸಮಾಜದಲ್ಲಿ ಗಡಬಡಿಯಿಂದ ಏಳುವ ಕಾಲಕ್ಕೆ ಪರಸ್ಪರ ಸಂಘರ್ಷಣ ದಿಂದ ಬಹುಜನ ಅರಸರ ಕೊರಳೊಳಗಿನ ಸರಗಳು ಹರಿದವು (**त्रुट्**).

ಕ್ಷಮೆ ಇಲ್ಲದ ಸರ್ಪವು ತನಗೆ ಕಾಲು ತಾಕಿಸಿದವನನ್ನು ರಕ್ತಕುಡಿಯ ಬೇಕೆಂಬ ಇಚ್ಛೆಯಿಂದ ಕಡಿಯುವದೋ (**दंश्**)?

ಇಕ್ಷ್ವಾಕುವಂಶದವರ ಕುಲಗುರುವಾದ ವಸಿಷ್ಠನಿಗೆ ಮೊದಲು ನಮಸ್ಕರಿಸಿ, ರಾಮನು ತನ್ನ ತಮ್ಮಂದಿರನ್ನು ಆಲಿಂಗಿಸಿದನು (**ष्वञ्ज्**).

ಇಂದ್ರಜಿತುವು ಹತನಾಗಲು, ಅವನ ಅಕಾಲಮರಣದ ಶೋಕವು ಉರಿ ಯೋಪಾದಿಯಲ್ಲಿ ರಾವಣನನ್ನು ಸುಟ್ಟಿತು (**भ्रस्ज्**).

ಯಾತರಿಂದ ನಾನು ಬದುಕುತ್ತೇನೋ, ಅದನ್ನು ಒಯ್ಯುವದರಿಂದ ನನ್ನ ಪ್ರಾಣ ತಕ್ಕೊಳ್ಳುವ ಯತ್ನ ಮಾಡುತ್ತೀ (**यस्**).

ದೀಪದ ಜ್ವಾಲೆಗೆ ಮೆಚ್ಚಿ ಪತಂಗವು ಅದರ ಮೇಲೆ ಒಮ್ಮಿಂದೊಮ್ಮೆ ಬಿದ್ದು ಸತ್ತಿತು (**मृत्युं**, ಹಾಗು **ऋ** ಧಾತು).

ಆನೆಯನ್ನು ತಿರುಗಿಸುವ ಇಚ್ಛೆಯಿಂದ ಅದನ್ನು ಅಜನು ಬಾಣದಿಂದ ಎಸೆ ದನು (**व्यध्**).

ರಾಕ್ಷಸರ ಕೂಡ ಹೋರಾಡುತ್ತಿರುವಾಗ, ರಾಮನು ತನ್ನ ಹದನಾದ ಕೈದು ಗಳಿಂದ ವೈರಿಗಳನ್ನು ನೂರಗಟ್ಲೆ ಕಡಿದನು (**व्रश्च्**).

---

[1] **वि, आ, परि, उप** ಉಪಸರ್ಗಗಳ ಯೋಗವಿದ್ದಲ್ಲಿ **रम्** ಧಾತುವು ಪರಸ್ಮೈಪದಪ್ರತ್ಯಯ ಗಳನ್ನು ಧರಿಸುತ್ತದೆ.

ಸೀತೆಯ ಅಗಲುವಿಕೆಯಿಂದುಂಟಾದ ದುಃಖದಲ್ಲಿ ರಾಮನ ಆತ್ಮವು ಮುಳುಗಿತು (मस्ज्).

ಪಾಂಚಾಲಿಯನ್ನು ಬಿಟ್ಟು ಉಳಿದದ್ದನ್ನೆಲ್ಲ ಯುಧಿಷ್ಠಿರನಿಂದ ಗೆದ್ದುಗೊಂಡು[1] ಬಳಿಕ, ನಿನ್ನ ಹೆಂಡತಿಯಾದ ಪಾಂಚಾಲಿಯನ್ನು ಪಣಕ್ಕೆ (पण्) ಹಚ್ಚೆಂದು ಧಾರ್ತರಾಷ್ಟ್ರರು ಅವನಿಗೆ ಅಂದರು.

ಹಕ್ಕಿಯು ಒಯ್ದ ರತ್ನವ ತಿರುಗಿ ತರಲಿಕ್ಕೆ ನಾನು ಬಹು ಪ್ರಯಾಸಪಟ್ಟೆನು (प्र+यस्).

ದೊಡ್ಡವರ ಕೂಡ ಹಗೆತನ ಕಟ್ಟಿಕೊಳ್ಳುವವನು (वैराय) ತೀವ್ರ ನಷ್ಟವಾಗುವನು (शद्).

ಗಳಿಗೆಗಳಿಗೆಗೆ ನನ್ನಿಂದ ಸಹಸ್ರಾವಧಿ ಅಪರಾಧಗಳು ಆಗುತ್ತವೆ; ಎಲೈ ದೇವರೇ, ಅವನ್ನೆಲ್ಲ ಕ್ಷಮಿಸು!

ಈ ಕನ್ಯೆಯ ವರ್ಚಸ್ಸು ಅನಿವಾರ್ಯವಾದದ್ದು (अहो)! ಜೀವವುಳ್ಳ (चित्) ವಸ್ತುಗಳಷ್ಟೇ ಈಕೆಯ ಸೇವೆಯನ್ನು ಮಾಡುತ್ತವಂತಲ್ಲ, ಚೈತನ್ಯವಿಲ್ಲದವಾದರೂ ಮಾಡುತ್ತವೆ.

ಸಮೀಪದಲ್ಲಿರುವ ನದಿಯ ತುಷಾರಗಳಿಂದ ತಂಪಾದ ಗಾಳಿಯು ತೋಟದೊಳಗಿನ ಅತಿಮುಕ್ತಲತೆಯನ್ನು ಮೆಲ್ಲನೆ ಅಲ್ಲಾಡಿಸುತ್ತದೆ (धू).

ಅಜನು ಶಂಖವನ್ನು ಊದಲಾಗಿ (ध्मा) ಓಡಿಹೋದ ಅವನ ವೀರರು ತಿರುಗಿ ಬಂದು, ಅವನ ಹಗೆಗಳ ಸೇನೆಗಳು ಮಲಗಿದ್ದದ್ದನ್ನು ಕಂಡರು.

---

## ಕೋಶ ೧.

### ಧಾತುಗಳು.

अर्ज् (೧ನೇ ಗಣ ಪ. ೧೦ನೇ ಗ.) ದೊರಕಿಸು, ಸಿಗು.

अर्ह् (೧ನೇ ಗ. ಪ., ೧೦ನೇ ಗ. ಆ.) ಯೋಗ್ಯವಾಗು, ಪಾತ್ರನಾಗು.

कन् (೧ನೇ ಗ. ಆ.) ದೊರಕಿಸು, ಸಿಗು.

कृत् (೬ನೇ ಗ. ಪ.) ಕಡಿ, ಕೊಯ್ಯು.

कॄ (೬ನೇ ಗ. ಪ.) ಹರವು, ಚಲ್ಲು. वि+कॄ ಸೂರೆ ಮಾಡು.

कॄत् (೧೦ನೇ ಗ.) ಸಮಾರಂಭದಿಂದ ಮಾಡು, ಸ್ತುತಿಸು, ಹೊಗಳು.

क्रम् (ಪ.) ನಡೆ, ಹೆಜ್ಜೆ ಇಡು.

क्रम् (ಆ.) ನಡಿಸು, ಪರಿಣಮಿಸು; आ+क्रम् ಸಮೀಪಿಸು, ಏಳು, ತುಳಿ, ಏರು; अति+क्रम् ದಾಟು, ಮೀರು.

क्लम् (೧ನೇ ಗ. ಪ.) ದಣಿ, ಕುಂದು.

क्षम् (೪ನೇ ಗ. ಪ.) ತಾಳು, ಸೈರಿಸು.

---

1) ೪ನೇ ಪುಟದಲ್ಲಿ ೨ನೇ ಟಿಪ್ಪಣಿಯನ್ನು ನೋಡು.

**गुह्** (೧ನೇ ಗ. ಉಭ.) ಅಡಗಿಸು, ಬಚ್ಚಿಡು, ಮುಚ್ಚು.

**घ्रा** (೧ನೇ ಗ. ಪ.) ಮೂಸಿ ನೋಡು, ಮೂಸು; **उप+घ्रा** ಮೂಸಿ ನೋಡು.

**चम्** (೧ನೇ ಗ. ಪ.) ನೆಕ್ಕು, ಕುಡಿ.

**चित्** (೧೦ನೇ ಗ. ಆ.) ಬದುಕು, ಬಾಳು.

**जनय्** (**जन्** ಧಾ. ಪ್ರೇರಣಾರ್ಥಕ) ಕಾರಣವಾಗು, ಹುಟ್ಟಿಸು; **जनयितुम्** (**जन्** (ಇದರ ಭಾವರೂಪ) ಹುಟ್ಟಿಸಲಿಕ್ಕೆ.

**जॄ** (೧ನೇ, ೪ನೇ ಗ. ಪ. ಮತ್ತು ೧೦ನೇ ಗ.) ಹಳೇದಾಗು, ಕ್ಷಯವಾಗು.

**तक्ष्** (೧ನೇ ಗ. ಪ.) ಕೆತ್ತು; **सम्+तक्ष्** ಚೂರು ಮಾಡು, ಗಾಯ ಮಾಡು, ತರಿ.

**तर्ज्** (೧ನೇ ಗ. ಪ., ೧೦ನೇ ಗ. ಆ.) ಹೆದರಿಸು, ಬೆದರಿಸು, ಬುದ್ಧಿ ಹೇಳು.

**त्रस्** (ಪ.) ನಡುಗು, ಅಂಜು.

**त्रुट्** (ಪ.) ಮುರಿ, ಹರಿ.

**दंश्** (೧ನೇ ಗ. ಪ., ೧೦ನೇ ಗ. ಆ.) ಕಡಿ, ಚುಚ್ಚು.

**धू** (೬ನೇ ಗ. ಪ.) ಅಲ್ಲಾಡಿಸು.

**नद्** (೧ನೇ ಗ. ಪ.) ಗರ್ಜಿಸು, ಧ್ವನಿ ಮಾಡು, ಮೊರೆ.

**वि+नश्** ಸಾಯು.

**पण्** (೧ನೇ ಗ.) ಸ್ತುತಿಸು, ಜೂಜಿಗೆ ಇಡು, ಜೂಜಾಡು.

**भ्रम्** (ಪ.) ತಿರುಗಾಡು, ತಿರುಗು.

**भ्रस्ज्** (೬ನೇ ಗ. ಉಭ.) ಒಣಗಿಸು, ಸುಡು, ಬೇಯಿಸು.

**मस्ज्** (೬ನೇ ಗ. ಪ.) ಮುಣುಗು, ಬೀಳು.

**म्ना** (೧ನೇ ಗ. ಪ.) ಮನಸ್ಸಿನಲ್ಲಿ ಮತ್ತೊಮ್ಮೆ ತಿರಿಗಿ ಅನ್ನು, ಆಲೋಚಿಸು; **सम्+आ+म्ना** ತಿರಿಗಿ ಹೇಳು, ತಿಳಿ, ವಿಧಿಸು.

**यम्** (೧ನೇ ಗ. ಪ.) ಆವರಿಸು, ಅಂಕೆಯಲ್ಲಿ ಇಡು, ಅಡ್ಡಿಮಾಡು; **नि+यम्** ಹಿಡಿದಿಡು, ಅಂಕೆಯಲ್ಲಿಡು.

**यस्** (೪ನೇ ಗ. ಪ.) ಹೆಣಗಾಡು, ಯತ್ನ ಮಾಡು; **प्र+यस्** ಪ್ರಯತ್ನ ಮಾಡು, ಹೆಣಗಾಡು.

**वि+युज्** (ಕರ್ಮಣಿ) ಬೇರೆಯಾಗು, ಅಗಲು.

**वि+रच्** (೧೦ನೇ ಗ.) ರಚಿಸು, ಮಾಡು, ಕ್ರಮ ಪಡಿಸು.

**वि+रम्** (೧ನೇ ಗ. ಪ.) ತಡೆ, ನಿಲ್ಲು.

**लष्** (ಪ.) ಇಚ್ಛಿಸು, ಲೋಭಿಸು; **अभि+लष्** ಕೋರು, ಬಯಸು.

**लिप्** (೬ನೇ ಉಭ.) ಪೂಸು, ಅನುಲೇಪಿಸು.

**लुप्** (೪ನೇ ಗ. ಪ.) ನಾಶವಾಗು ಅದೃಶ್ಯವಾಗು.

**लुप्** (೬ನೇ ಗ. ಉಭ.) ಸುಲುಕೊಳ್ಳು, ಕಸಕೊಳ್ಳು.

**वप्** (೧ನೇ ಗ. ಉಭ.) ಕತ್ತರಿಸು, ಕಡಿ, ಬಿತ್ತು; **निर्+वप्** ಬಲಿಕೊಡು, ದಾನಮಾಡು.

**वृष्** (೧ನೇ ಗ. ಪ.) ಮಳೆ ಬರು, ಸುರಿ.

**व्यध्** (೪ನೇ ಗ. ಪ.) ಇರಿ, ಭೇದಿಸು, ಗಾಯ ಮಾಡು.

**व्रश्च्** (೬ನೇ ಗ. ಪ.) ಹರಿ, ಕಡಿ.

**शद्** (೧ನೇ ಗ.) ಸಾಯು, ಹಾಳಾಗು.

**सम्+श्रि** ಆಶ್ರಯ ಮಾಡು, ಅವಲಂಬಿಸು.

**उद्+सह्** ಸಮರ್ಥನಾಗು, ಸರಿಯಾಗು.

**सञ्ज्** (೧ನೇ ಗ. ಪ.) ಅಂಟಿಕೊಳ್ಳು; **वि+अति+सञ्ज्** [**व्यतिषञ्ज्**] ಕೂಡಿಸು.

**सो** (೪ನೇ ಗ. ಪ.) ಮುಗಿಸ , ನಾಶ ಮಾಡು; **वि+अव+सो** ನಿಶ್ಚಯಿಸು, ಪ್ರಯತ್ನ ಮಾಡು.

**अव+स्था** ವಾಸವಾಗಿರು, ಇರು.

**अङ्ग** (ನ.) ಅವಯವ.

**अञ्जन** (ನ.) ಕಾಡಿಗೆ.

**अननुष्ठान** (ನ.) [**अनुष्ठान** (ನ.) ಮಾಡೋಣ, ನೆರವೇರಿಸೋಣ] ಮಾಡದೆ ಇರೋಣ.

**अन्य** (ಸ. ವಿ.) ಎರಡನೇ.

**अनिग्रह** (ಪು.) [**निग्रह** (ಪು.) ಬಿಗಿಹಿಡಿಯೋಣ] ಬಿಗಿ ಹಿಡಿಯದೆ ಇರೋಣ.

**अनीक** (ನ.) ಸೈನ್ಯ.

**अपथ्य** (ನ.) ಶರೀರಕ್ಕೆ ಅಹಿತವಾದ ಪದಾರ್ಥ.

**अपराधसहस्र** (ನ.) [**सहस्र** (ನ.) ಸಾವಿರ] ಸಾವಿರ ತಪ್ಪು.

**अभिहित** ಹೇಳಿದಂಥ [**अभि+धा** ಇದರ ಭೂತ ಕೃದ್ವಾಚಕ].

**अभ्यागत** [**अभि+आ+गम्** ಧಾತುವಿನ ಭೂ. ಕೃ.] ಬಂದ.

**अभ्यागत** (ಪು.) ಅತಿಥಿ.

**अरुण** (ಪು.) ಸೂರ್ಯನ ಸಾರಥಿ.

**अर्घ्यसत्कार** (ಪು.) [**सत्कार** (ಪು.) ಆದರಾತಿಥ್ಯ] ಅರ್ಘ್ಯದ ಸಾಧನದಿಂದ ಮಾಡಿದ ಆದರಸತ್ಕಾರ.

**अर्घ्य** (ನ.) ಅತಿಥಿಯ ಸನ್ಮಾನಕ್ಕಾಗಿ ತಂದ ಪೂಜೆಯ ಪದಾರ್ಥಗಳು.

**अर्थसंशय** (ಪು.) [**संशय** (ಪು.) ಭಯ] ಧನ ಹೋಯಿತೆಂಬ ಭಯ.

**अल्प** (ವಿ.) ಸಣ್ಣ, ತುಸು; **अनल्प** (ವಿ.) ಬಹಳ.

**अवज्ञात** [ಇದು **अव+ज्ञा** ಇದರ ಭೂತ ಕೃ.] ತಾತ್ಸಾರ ಮಾಡಲ್ಪಟ್ಟ, ತಿರಸ್ಕಾರ ಮಾಡಲ್ಪಟ್ಟ.

**असत्पुरुषसेवा** (ಸ್ತ್ರೀ.) [**सत्** (ವಿ.) ಚಲೋ, **सेवा** (ಸ್ತ್ರೀ.) ಸೇವೆಯು] ಕೆಟ್ಟ ಮನುಷ್ಯನ ಸೇವೆಯು.

**अहि** (ಪು.) ಸರ್ಪ, ಹಾವು.

**अह्नाय** (ಕ್ರಿ. ವಿ.) ಕೂಡಲೇ, ತೀವ್ರ.

**आकाशवायु** (ಪು.) ಆಕಾಶದ ಗಾಳಿಯು.

**आन्तर** (ವಿ.) ಒಳಗಿನ.

**आमोद** (ಪು.) ಸುವಾಸನೆ, ಪರಿಮಳ.

**आरूढ** (ಇದು **आ+रुह्** ಧಾತುವಿನ ಭೂ. ಕೃ.) ಏರಿದ, ಹತ್ತಿದ.

**आलवाल** (ನ.) ನೀರು ನಿಲ್ಲುವದಕ್ಕಾಗಿ ಗಿಡದ ಸುತ್ತಲು ಕಟ್ಟಿದ ಪಾತಿ, ಅಥವಾ ಕಟ್ಟೆ.

**आहव** (ಪು.) ಕಾಳಗ.

**इन्द्रियार्थोपसेवन** (ನ.) [**इन्द्रिय** (ನ.) ಇಂದ್ರಿಯ **अर्थ** (ಪು.) ಪದಾರ್ಥ, **उपसेवन** (ನ.) ಉಪಭೋಗ] ಇಂದ್ರಿಯ ಸಂಬಂಧದ ಸುಖ, ವಿಷಯಸುಖ.

**उपकारिन्** (ವಿ.) ಉಪಕಾರಿಯಾದಂಥಾ.

**ऊर्जित** (ವಿ.) ಮೇಲಾದ, ಉತ್ಕೃಷ್ಟ.

**केश** (ಪು.) ಕೂದಲು.

**कोटि** (ಸ್ತ್ರೀ.) ಕೋಟಿ.

**कोप** (ಪು.) ಸಿಟ್ಟು.

**क्लान्त** [ಇದು **क्लम्** ಧಾ. ಭೂ. ಕೃ.] ಶ್ರಮಪಟ್ಟ, ದಣಿದ, ಸೊರಗಿದ.

**क्षितीश** (ಪು.) [**क्षिति** (ಸ್ತ್ರೀ.) ಭೂಮಿ] ಭೂಮಿಯ ಒಡೆಯನು, ಅರಸನು.

**खलभुजङ्ग** (ಪು.) [**खल** (ಪು.) ಮರುಳ; **भुजङ्ग** (ಪು.) ಸರ್ಪ] ಖಳನೆಂಬ ಭುಜಂಗ, ಸರ್ಪದಂತಿರುವ ದುರುಳನು.

**खलु** (ಅ.) ನಿಜವಾಗಿ.

**गगनमध्य** (ಪು. ನ.) **गगन** (ನ.) ಆಕಾಶ, **मध्य** (ಪು. ನ.) ಮಧ್ಯಭಾಗವು] ಆಕಾಶದ ಮಧ್ಯಭಾಗವು.

**गति** (ಸ್ತ್ರೀ.) ಆಶ್ರಯ, ಉಪಾಯ.

**गरुडाज्ञा** (ಸ್ತ್ರೀ.) ಹಾವಿನ ವೈರಿಯಾದ ಗರುಡನ ಅಜ್ಞೆಯು.

**गृहमेधिन्** (ಪು.) ಗೃಹಸ್ಥಧರ್ಮಗಳನ್ನು ನಡೆಸುವಂಥ ಯಜಮಾನನು.

**घर्मज** (ವಿ.) [**घर्म** (ಪು.) ಉಷ್ಣ, ಕಾವು] ಕಾವಿನಿಂದ ಹುಟ್ಟಿದ.

**चेतस्** (ನ.) ಮನಸು.

**जीवनाशा** (ಸ್ತ್ರೀ.) **जीवन** (ನ.) ಇರುವಿಕೆ, **आशा** (ಸ್ತ್ರೀ.) ಇಚ್ಛೆ] ಇರುವಿಕೆಯ ಕೋರಿಕೆ, ಬದುಕುವ ಆಶೆ.

**तद्देश** (ಪು.) ಅವನ ದೇಶ, ಆ ದೇಶ.

**तद्विद्विष्** [1] (ಪು.) ಅವನ ಶತ್ರು.

**तद्विभूति** (ಪು.) ಅವನ ಊರ್ಜಿತ ಸ್ಥಿತಿ.

**ताप** (ಪು.) ಉಷ್ಣ, ಉರಿ.

**तावत्** (ಕ್ರಿ. ವಿ.) ಆ ಕಾಲದೊಳಗೆ, ಅಷ್ಟು ಹೊತ್ತಿನಲ್ಲಿ.

**तूर्णम्** (ಕ್ರಿ. ವಿ.) ತೀವ್ರವಾಗಿ.

**तेजस्विन्** (ವಿ.) ಮಿಂಚುಳ್ಳ, ಧೈರ್ಯವುಳ್ಳ.

**तोय** (ನ.) ನೀರು.

**दम्पती** (ಪು. ದ್ವಿವಚನ) ಗಂಡಹೆಂಡರು.

**दन्त** (ಪು.) ಹಲ್ಲು.

**दुष्ट** (ವಿ.) ಕೆಟ್ಟ.

**द्विजन्मन्** (ಪು.) [**द्वि** ಎರಡು, **जन्मन्** (ನ.) ಜನ್ಮ] ಎರಡು ಜನ್ಮಗಳುಳ್ಳವ, ಮೊದಲಿನ ಮೂರು ಜಾತಿಗಳಲ್ಲಿ ಒಂದಕ್ಕೆ ಸೇರಿದವ, ಬ್ರಾಹ್ಮಣ.

**द्विजिह्व** (ಪು.) [**जिह्वा** (ಸ್ತ್ರೀ.) ನಾಲಿಗೆ] ಎರಡು ನಾಲಿಗೆಯುಳ್ಳದ್ದು, ಸರ್ಪ.

**द्विष्** (ಪು.) ಶತ್ರು.

**धनाशा** (ಸ್ತ್ರೀ.) ಧನದಾಶೆಯು.

**धर्मसूत्रकार** (ಪು.) [**धर्म** (ಪು.) ಕಾಯದೆ, **सूत्र** (ನ.) ನಿಯಮ] ಕಾಯದೆಗಳ ಸೂತ್ರಗಳನ್ನು ರಚಿಸುವವನು.

**धैर्यधन** (ವಿ.) [**धैर्य** (ನ.) ಎದೆ] ಧೈರ್ಯವೆಂಬ ಧನವುಳ್ಳ.

**निदाघ** (ಪು.) ಬೇಸಿಗೆಯ ಕಾಲ.

**निन्दित** (**निन्द्** ಧಾ. ಭೂ. ಕೃ. ಕ.) ಆಕ್ಷೇಪ ಹೊಂದಿದ.

**निरस्त** [**निर्** + **अस्** (ಚಲ್ಲು) ಧಾ. ಇದರ ಭೂ. ಕೃ.] ಚದರಿಸಲ್ಪಟ್ಟ, ನಾಶವಾದ.)

**निवर्तन** (ನ.) ಬಿಟ್ಟುಬಿಡೋಣ, ತಿರುಗೋಣ.

**निष्ठाशून्य** (ವಿ.) [**निष्ठा** (ಸ್ತ್ರೀ.) ಸ್ಥಿರತ್ವ, **शून्य** (ವಿ.) ಇಲ್ಲದ, ರಹಿತ] ಚಂಚಲ, ಚಪಲ, ಅಸ್ಥಿರ.

**निष्फलता** (ಸ್ತ್ರೀ.) ನಿಷ್ಫಲತೆ.

**नीच** (ವಿ.) ಕೀಳ.

**न्यायवादिन्** (ವಿ.) [**न्याय** (ಪು.) ನಿಜವಾದದ್ದು] ಖರೆ ಮಾತಾಡುವವ.

**पतन** (ನ.) ಬೀಳೋಣ, ನಾಶ, ಕೆಡೋಣ.

**पथ्य** (ನ.) ಶರೀರಕ್ಕೆ ಹಿತವಾದ ಪದಾರ್ಥ.

**पदार्थ** (ಪು.) ಪದಾರ್ಥ, ಒಡವೆ.

**परम्** (ಅ.) ಆದರೆ, ಪರಂತು.

**पर्याप्तम्** (ಕ್ರಿ. ವಿ.) ಪೂರ್ಣವಾಗಿ, ಯಥೇಚ್ಛವಾಗಿ.

**पावन** (ವಿ.) ಪವಿತ್ರವಾದ.

**पुष्टि** (ಸ್ತ್ರೀ.) ಪೋಷಣೆಯು.

**प्रचण्ड** (ವಿ.) ಉಗ್ರ, ತೀಕ್ಷ್ಣ.

**प्रतापनिधि** (ಪು.) [**प्रताप** (ಪು.) ಉಷ್ಣತೆ] ತೇಜದ ರಾಶಿಯು.

**प्रतिपक्ष** (ಪು.) ಶತ್ರು.

**प्रत्युत्पन्नमति** (ವಿ.) **प्रति** + **उद्** + **पद्** ಧಾ. ಭೂತಕೃದ್ವಾಚಿ **प्रत्युत्पन्न**] ಕುಶಾಗ್ರಬುದ್ಧಿಯುಳ್ಳ, ಸಮಯಸೂಚಕತೆಯುಳ್ಳ.

**प्रमाद** (ಪು.) ತಪ್ಪು.

**प्राण** (ಪು.) ಜೀವ (ನಿತ್ಯಬಹುವಚನ).

**बहिरुपाधि** (ಪು.) [**उपाधि** ಗುಣ] ಹೊರಗಿನ ಗುಣ.

**बाणवृष्टि** (ಸ್ತ್ರೀ.) ಬಾಣಗಳ ವೃಷ್ಟಿಯು.

**भानु** (ಪು.) ಸೂರ್ಯ.

**भोगतृष्णा** (ಸ್ತ್ರೀ.) [**भोग** (ಪು.) ವಿಷಯಸುಖ, **तृष्णा** (ಸ್ತ್ರೀ.) ಆಶೆ] ವಿಷಯಸುಖದ ಆಶೆ.

**मत** (ನ.) ಅಭಿಪ್ರಾಯ, ಉಪದೇಶ.

---

[1] ಅಂತ್ಯ **ष्**ಕ್ಕೆ ಪ್ರಥಮೈಕವಚನದಲ್ಲಿ ಅಥವಾ ವ್ಯಂಜನಾದಿಪ್ರತ್ಯಯಗಳು ಪರವಾಗಲು ट् ಅಥವಾ ड् ಆದೇಶವಾಗುವದು. ಪ್ರಥಮೈಕವಚನ **विद्विट्-ड्**.

**मधुपर्क** (ಪು.) ಜೇನುತುಪ್ಪ, ಹೆಪ್ಪುಗೊಂಡ ಹಾಲು ಅತಿಥಿಗೆ ಕೊಡೋಣ.

**महाज** (ಪು.) ದೊಡ್ಡ ಆಡು.

**महानुभाव** (ವಿ.) ಗಂಭೀರ, ಉದಾರ.

**महाराज** (ಪು.) ದೊಡ್ಡ ಅರಸು.

**महोक्ष** (ಪು.) [**उक्षन्** (ಪು.) ಹೋರಿ] ದೊಡ್ಡ ಹೋರಿ.

**मान** (ಪು.) ಗರ್ವ; ಸೊಕ್ಕು.

**मालाकार** (ಪು.) ತೋಟಿಗ.

**मिथः** (ಕ್ರಿ. ವಿ.) ಪರಸ್ಪರವಾಗಿ, ಕೂಡಿ.

**यावत्** (ಕ್ರಿ. ವಿ.) ಎಲ್ಲಿಯ ತನಕ.

**रण** (ನ.) ಯುದ್ಧಸ್ಥಳ.

**रश्मिमत्** (ಪು.) [**रश्मि** (ಪು.) ಕಿರಣ] ಸೂರ್ಯ.

**राष्ट्र** (ನ.) ರಾಜ್ಯ, ಜನಾಂಗ.

**रुष्** (ಸ್ತ್ರೀ.) ಸಿಟ್ಟು.

**लक्ष्मी** (ಸ್ತ್ರೀ.) ಶೋಭೆ, ವೈಭವ, ವಿಷ್ಣುವಿನ ಹೆಂಡತಿ.

**वणिग्जन** (ಪು.) [**वणिज्** (ಪು.) ವರ್ತಕ] ವರ್ತಕರು.

**वत्सतरी** (ಸ್ತ್ರೀ.) ಕಡಸು, ಮಣಕ.

**वधक्रम** (ಪು.) ಕೊಲ್ಲುವ ರೀತಿ.

**वन्य** (ವಿ.) ಅಡವಿಯಲ್ಲಿರುವ ಅಥವಾ ಹುಟ್ಟುವ.

**वपुस्** (ನ.) ಶರೀರ.

**वर्मन्** (ನ.) ಕವಚ.

**वारिद** (ಪು.) ಮೇಘ, ಮೋಡ.

**विचित्र** (ವಿ.) ಚಮತ್ಕಾರದ, ಆಶ್ಚರ್ಯಕರವಾದ.

**विपिन** (ನ.) ಅಡವಿ.

**विश्वतः**[1] (ಕ್ರಿ. ವಿ.) ಎಲ್ಲ ದಿಕ್ಕುಗಳಲ್ಲಿ.

**विहित** (**वि + धा** ಧಾತುವಿನ ಭೂ. ಕೃ. ಕ.) ವೇದದಿಂದ ನೇಮಿಸಲ್ಪಟ್ಟ.

**वृद्धि** (ಸ್ತ್ರೀ.) ಊರ್ಜಿತ ಸ್ಥಿತಿ, ಉತ್ಕರ್ಷ.

**वैषम्य** (ನ.) ಆಪತ್ತು, ಕಠಿಣಕಾಲ.

**व्यथित** (**व्यथ्** ಧಾ. ಭೂ. ಕೃ. ಕ.) ಕಷ್ಟಪಟ್ಟ.

**शक्य** (ವಿ.) ಸಂಭವವುಳ್ಳ, ಕೈಲಾಗುವಂಥ.

**शचीपति** (ಪು.) ಶಚೀದೇವಿಯ ಗಂಡ, ಇಂದ್ರ.

**शनैस्** (ಕ್ರಿ. ವಿ.) ಮೆಲ್ಲಗೆ.

**शब्द** (ಪು.) ಶಬ್ದ, ಧ್ವನಿ.

**शरीरिन्** (ವಿ.) ಶರೀರವುಳ್ಳ.

**शरीरिन्** (ಪು.) ಮನುಷ್ಯ.

**शस्त्रसंपात** (ಪು.) **शस्त्र** (ನ.) ಆಯುಧ, **संपात** (ಪು.) ಬೀಳೋಣ] ಶಸ್ತ್ರದ ಹೊಡತ.

**शिखिन्** (ಪು.) ನವಿಲು.

**शीत** (ವಿ.) ಚಳಿ, ತಂಪು.

**श्रम** (ಪು.) ದಣಿವು.

**श्रोत्र** (ನ.) ಕಿವಿ.

**श्रोत्रिय** (ಪು.) ವೇದ ಬಲ್ಲ ಬ್ರಾಹ್ಮಣನು.

**संगत** (**सम् + गम्** ಇದರ ಭೂತಕೃದ್ವಾಚಕ) ಕೂಡಿದಂಥ.

**सकल** (ವಿ.) ಎಲ್ಲ, ಯಾವತ್ತು.

**सक्रोध** (ವಿ.) ಸಿಟ್ಟುಳ್ಳ.

**सच्चरणव्रत** (ನ.) [**व्रत** (ನ.) ಹರಿಕೆ] ಚಲೋ ನಡಾವಳಿಯ ಹರಿಕೆ.

**सद्यस्** (ಕ್ರಿ. ವಿ.) ಒಮ್ಮೆಲೆ.

**समन्तात्** (ಕ್ರಿ. ವಿ.) ಸುತ್ತಲು.

**सम्यक्** (ಕ್ರಿ. ವಿ.) ಚನ್ನಾಗಿ, ನೆಟ್ಟಗೆ.

**सेवन** (ನ.) ಸೇವೆಯು, ರೂಢಿ ಮಾಡೋಣ.

**स्थित** (**स्था** ಧಾ. ಭೂ. ಕೃ.) ಇರೋಣ.

**स्वजनवियोग** (ಪು.) ತನ್ನ ಕುಟುಂಬದವರಿಂದ ಬೇರೆಯಾಗೋಣ.

**स्वन** (ಪು.) ಗದ್ದಲ, ಆರ್ಭಟ.

**स्वहित** (ನ.) ತನ್ನ ಹಿತ.

**स्वेदलव** (ಪು.) [**स्वेद** (ಪು.) ಬೆವರು] ಬೆವರಿನ ಹನಿ.

**हेतु** (ಪು.) ಕಾರಣ.

---

1) ನಾಮಗಳ ಮುಂದೆ **तस्** ಪ್ರತ್ಯಯ ಬರಲು ಅದು ಪಂಚಮಿಯ ಅಥವಾ ಸಪ್ತಮಿಯ ಅರ್ಥವನ್ನು ಕೊಡುತ್ತದೆ.

ಹೊಂದಿಕೆಯಾಗಿದ್ದಂಥ **सन्निहित** (ಇದು **सम्** **+नि+धा** (ಇದರ ಭೂ. ಕೃ. ಕ.).

ಅಜ **अज** (ಪು.) ಒಬ್ಬ ಮನುಷ್ಯನ ಹೆಸರು.

ಅತಿಮುಕ್ತಬಳ್ಳಿ (ಸ್ತ್ರೀ.) **अतिमुक्तलता** (ಸ್ತ್ರೀ.)

ಎಳಕೊಳ್ಳಲ್ಪಟ್ಟಂಥ ಮೋಸಗೊಳಿಸಲ್ಪಟ್ಟಂಥ **विलोभन** (ಇದು **वि+लुभ्** ಧಾ. ಪ್ರೇರ. ಭೂ. ಕೃ.).

ರಕ್ತ **शोणित** (ನ.).

ಇಚ್ಛಾ **कांक्षा** (ಸ್ತ್ರೀ.).

ಸಿಟ್ಟಿಗೆಬ್ಬಿಸಲ್ಪಟ್ಟ **क्रुद्ध** (**क्रुध्** ಧಾ. ಭೂ. ಕೃ.).

ಮೊದಲನೇ **प्रथमम्** (ಕ್ರಿ. ವಿ.), **आदौ**, ಇದು **आदि** ಇದರ ಸಪ್ತಮ್ಯೇಕವಚನ.

ಜ್ವಾಲೆ, ಉರಿ **शिखा** (ಸ್ತ್ರೀ.).

ಮೆಲ್ಲನೆ **मन्दम्** (ಕ್ರಿ. ವಿ.).

ಬಿರುಸು **परुष** (ವಿ.).

ಶೋಕ **शोक** (ಪು.)

ಬಿರುಸು **परुष** (ವಿ.), (ನುಡಿಗಳು) **परुषाक्षर** [(ನ.).

ಅವಸರದಿಂದ, ಒತ್ತರದಿಂದ **ससंभ्रमम्** (ಕ್ರಿ.ವಿ.)

ಇಕ್ಷ್ವಾಕುಕುಲ **इक्ष्वाकु** (ಪು. ಬಹುವಚನ)

ಇಂದ್ರಜಿತು **इन्द्रजित्** (ಪು.), ರಾವಣನ ಮಗನು.

ಹೇಳಲಿಕ್ಕೆ ಬಾರದಂಥ, ಉಚ್ಚರಿಸಲಿಕ್ಕಾಗದಂಥ **अनिर्वचनीय** (ವಿ.) **अनिर्वर्णनीय** (ವಿ.).

ಕೃತಘ್ನತೆ **कृतघ्नता** (ಸ್ತ್ರೀ.).

ತೇವವುಳ್ಳ, ಒದ್ದೆಯಾದ **आर्द्र** (ವಿ.).

ದೀಪದ ಹುಳ, ಪತಂಗ **पतङ्ग** (ಪು.)

ಸರ, ಮಾಲೆ **हार** (ಪು.).

ಪಾಂಚಾಲ ದೇಶದ ಅರಸುಮಗಳು **पाञ्चाली** (ಸ್ತ್ರೀ.).

ಸಾಮರ್ಥ್ಯ, ತೇಜಸ್ಸು, ವರ್ಚಸ್ಸು **प्रभाव** (ಪು.).

ಒಬ್ಬರಿಗೊಬ್ಬರು ತಿಕ್ಕಾಡುವದು, ಪರಸ್ಪರ ಸಂಘರ್ಷಣ **परस्परसंघट्टन** (ನ.).

ಭರಕ್ಕನೆ ತೆಗೆದುಕೊಂಡು ಹೋದ **आक्षिप्त** **आ+क्षिप्** (ಧಾ. ಭೂ. ಕೃ. ಕ.).

ತಿರಿಗಿ ಸಿಕ್ಕುವದು **प्रत्यागम** (ಪು.).

ನೀರಿನ ಧೂಮ್ರ **कण** (ಪು.), **सीकर** (ಪು.).

ಫಕ್ಕನೆ **सहसा** (ಕ್ರಿ. ವಿ.).

ಕ್ಷಮೆ ಇಲ್ಲದ **अमर्षण** (ವಿ.).

## ೨ನೇ ಪಾಠ.

### ೫ನೇ, ೮ನೇ ಗಣಗಳು.

ಸಂಸ್ಕೃತ ಧಾತುಗಳಿಗೆ ಕಾಲಗಳೂ ಅರ್ಥಗಳೂ ಕೂಡಿ ಹತ್ತು ಉಂಟು. ಇವುಗಳಲ್ಲಿ ವರ್ತಮಾನಕಾಲ, ಅನದ್ಯತನಭೂತಕಾಲ, ಆಜ್ಞಾರ್ಥ, ವಿಧ್ಯರ್ಥ ಈ ನಾಲ್ಕರಲ್ಲಿ ಧಾತುಗಳು ಕೆಲವು ಹೆಚ್ಚಿನ ವಿಕಾರಗಳನ್ನು ಹೊಂದುತ್ತವೆ. ಆ ಸಂಬಂಧದಿಂದ ಧಾತುಗಳಲ್ಲಿ ಒಂಬತ್ತು ಗಣಗಳು[1] ಕಲ್ಪಿಸಲ್ಪಟ್ಟವೆ. ಈ ನಾಲ್ಕು ಕಾಲಾರ್ಥಗಳ ಪ್ರತ್ಯಯಗಳಿಗೆ ಸಾರ್ವಧಾತುಕ ಆಖ್ಯಾತಪ್ರತ್ಯಯಗಳೆಂಬ ಸಂಜ್ಞೆಯುಂಟು.

---

[1] ಸಂಸ್ಕೃತವ್ಯಾಕರಣಕಾರರು ಹತ್ತು ಗಣಗಳೆಂದು ಹೇಳುತ್ತಾರೆ; ಆದರೆ ಹತ್ತನೇ ಗಣದಲ್ಲಿ ಬರುವ **अय** ಎಂಬ ವಿಕರಣವು ವರ್ತಮಾನ, ಅನದ್ಯತನಭೂತ, ಆಜ್ಞಾರ್ಥ, ವಿಧ್ಯರ್ಥಗಳಲ್ಲಿ ಈ ಗಣದ ಧಾತುಗಳ ಮೇಲೆ ಬರುವದಲ್ಲದೆ ಬೇರೆ ಅನೇಕ ರೂಪಗಳಲ್ಲಿಯೂ ಬರುತ್ತವೆ.

೧. ಈ ಸಾರ್ವಧಾತುಕ ಆಖ್ಯಾತಪ್ರತ್ಯಯಗಳ ಸಂಬಂಧದಿಂದ ಸಂಸ್ಕೃತ ವ್ಯಾಕರಣಕಾರರು ಮಾಡುವ ಹತ್ತು ಗಣಗಳಲ್ಲಿ ಎರಡು ವರ್ಗಗಳನ್ನು ಮಾಡ ಬಹುದು. ೧ನೇ, ೪ನೇ, ೬ನೇ ೧೦ನೇ ಗಣಗಳ ಧಾತುಗಳು ೧ನೇ ವರ್ಗದವು, ಉಳಿದವು ೨ನೇ ವರ್ಗದವು. ೧ನೇ ವರ್ಗದ ಭೇದಲಕ್ಷಣವೇನಂದರೆ, ಅದ ರೊಳಗಿನ ಧಾತುಗಳ ಅಂಗಗಳೆಲ್ಲ[1] ಅಕಾರಾಂತವಾಗಿರುತ್ತವೆ. ೨ನೇ ವರ್ಗದ ಧಾತುಗಳ ಅಂಗಗಳು ಅಕಾರಾಂತ ಇರುವದಿಲ್ಲ.

## ೨ನೇ ವರ್ಗದ ಧಾತುಗಳ ಮೊದಲಿನ ನಾಲ್ಕು ಕಾಲಾರ್ಥಗಳಲ್ಲಿ ರೂಪಗಳನ್ನು ಸಿದ್ಧಮಾಡುವ ಸಾಮಾನ್ಯ ನಿಯಮಗಳು.

೨. ಕೆಲವು ಪ್ರತ್ಯಯಗಳ ಪೂರ್ವದಲ್ಲಿ ಏಕರಣದಿಂದ ಕೂಡಿಕೊಂಡಂಥ ಧಾತುಗಳ ಮೂಲ ರೂಪಗಳೊಳಗೆ ಕೆಲ ವಿಧದ ಹೆಚ್ಚುಕಡಿಮೆಗಳಾಗುತ್ತವೆ. ಆ ಸಂಬಂಧದಿಂದ ಆಖ್ಯಾತಪ್ರತ್ಯಯಗಳಲ್ಲಿ ಸಬಲ ದುರ್ಬಲಗಳೆಂದು ಎರಡು ವರ್ಗಗಳನ್ನು ಮಾಡಬಹುದು.

### ಪರಸ್ಮೈಪದಪ್ರತ್ಯಯಗಳಲ್ಲಿ.

೩. ಏಕವಚನಗಳು ಸಬಲ, ಆದರೆ ವಿಧ್ಯರ್ಥದ ಏಕವಚನಗಳೂ ಆಜ್ಞಾ ರ್ಥದ ಮಧ್ಯಮಪುರುಷೈಕವಚನವೂ ದುರ್ಬಲವಾಗಿರುತ್ತವೆ.

೪. ದ್ವಿವಚನ ಬಹುವಚನಗಳು ದುರ್ಬಲ, ಆದರೆ, ಆಜ್ಞಾರ್ಥ ಉತ್ತಮ ಪುರುಷದ ದ್ವಿಬಹುವಚನಗಳು ಸಬಲವಾಗಿರುತ್ತವೆ.

ಅಂದರೆ ವರ್ತಮಾನ ಅನದ್ಯತನಭೂತಕಾಲಗಳ ಏಕವಚನಗಳೂ, ಆಜ್ಞಾ ರ್ಥದ ಪ್ರಥಮಪುರುಷದ ಏಕವಚನವು ಮತ್ತು ಉತ್ತಮಪುರುಷದ ಏಕದ್ವಿಬಹು ವಚನಗಳೂ ಸಬಲಪ್ರತ್ಯಯಗಳು.

### ಆತ್ಮನೇಪದಪ್ರತ್ಯಯಗಳಲ್ಲಿ.

೫. ಎಲ್ಲ ಪ್ರತ್ಯಯಗಳು ದುರ್ಬಲ, ಆದರೆ ಆಜ್ಞಾರ್ಥ ಉತ್ತಮಪುರುಷದ ಏಕದ್ವಿಬಹುವಚನಗಳು ಸಬಲ.

೬. ಸಬಲಪ್ರತ್ಯಯಗಳ ಹಿಂದಿನ ಧಾತುವಿನ ಅಂಗದ ಅಂತ್ಯಸ್ವರಕ್ಕೂ ಉಪಾಂತ್ಯ ಹ್ರಸ್ವಸ್ವರಕ್ಕೂ ಗುಣವಾಗುತ್ತದೆ. ಉದಾ: **चि** धा. **चिनु+ति=चिनो+ति=चिनोति**.

---

1) ಪ್ರತ್ಯಯಗಳನ್ನು ಹೊಂದಲಿಕ್ಕೆ ಸಿದ್ಧವಾದ ಧಾತುಗಳ ಅಥವಾ ನಾಮಗಳ ರೂಪಕ್ಕೆ **अंग** ಎಂಬ ಸಂಜ್ಞೆಯು.

### ವರ್ತಮಾನಕಾಲ.

೭. ಈ ಎರಡನೇ ವರ್ಗದ ಪರಸ್ಮೈಪದಪ್ರತ್ಯಯಗಳು ಮೊದಲನೇ ವರ್ಗದವುಗಳಂತೆಯೇ; ಆದರೆ ಆತ್ಮನೇಪದಪ್ರತ್ಯಯಗಳಲ್ಲಿ ತುಸು ಹೆಚ್ಚುಕಡಿಮೆಯುಂಟು. ಅದನ್ನು ಕೆಳಗೆ ವಿವರಿಸುತ್ತೇವೆ:—

(ಅ) ಮೊದಲನೇ ಪುಸ್ತಕದಲ್ಲಿ ಹೇಳಿದ ಆತ್ಮನೇಪದಪ್ರತ್ಯಯಗಳಲ್ಲಿ ಬರುವ इಕಾರಕ್ಕೆ ಬದಲಾಗಿ आಕಾರ ಬರುವದು.

(ಬ) ಉತ್ತಮಪುರುಷೈಕವಚನದ ಪ್ರತ್ಯಯವು ए.

(ಕ) ಪ್ರಥಮಪುರುಷದ ಬಹುವಚನದ ಪ್ರತ್ಯಯದೊಳಗಿನ न್‌ಕ್ಕೆ ಲೋಪ ಬರುವದು.

ಸಾರಾಂಶ, ಕೆಳಗೆ ಹೇಳಿದಂತೆ ಆತ್ಮನೇಪದವರ್ತಮಾನಕಾಲದ ಆಖ್ಯಾತ ಪ್ರತ್ಯಯಗಳಿರುವವು:—

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | ते | आते | अते |
| ಮ. ಪು. | से | आथे | ध्वे |
| ಉ. ಪು. | ए | वहे | महे |

೮. ೫ನೇ ಗಣದ ಧಾತುಗಳಿಗೆ नु ವಿಕರಣವು, ೮ನೇ ಗಣದ ಧಾತುಗಳಿಗೆ उ ವಿಕರಣವು ಬರುವವು.

### ೫ನೇ ಗಣ.

चि (ಪರ. ಮತ್ತು ಆತ್ಮ.) ಕೂಡಿಸು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | चिनोति | चिनुतः | चिन्वन्ति |
| ಮ. ಪು. | चिनोषि | चिनुथः | चिनुथ |
| ಉ. ಪು. | चिनोमि | चिनुवः / चिन्वः | चिनुमः / चिन्मः |

ಇದರಲ್ಲಿ ಮೂಲಧಾತು चि; ಅದರ ಮೇಲೆ ಆ ಗಣದ ವಿಕರಣ ಸೇರಲು चिनु ಎಂಬ ವಿಕರಣವಿಶಿಷ್ಟರೂಪವಾಗುತ್ತದೆ. ಈ ರೂಪವು मि, सि, ति ಮುಂತಾದ ಸಬಲಪ್ರತ್ಯಯಗಳು ಮುಂದೆ ಬರಲು चिनो ಎಂದಾಗುತ್ತದೆ. वस, मस ಮುಂತಾದ ದುರ್ಬಲಪ್ರತ್ಯಯಗಳು ಪರವಾಗಲು ಯಾವ ವಿಕಾರವನ್ನೂ ಹೊಂದುವದಿಲ್ಲ.

(ಅ) व, मಕಾರಗಳು ಆದಿಯಲ್ಲಿರುವಂಥ ಪ್ರತ್ಯಯಗಳು ಪರವಾಗಲು ವಿಕರಣದ ಅಂತ್ಯ उಕಾರಕ್ಕೆ ವಿಕಲ್ಪದಿಂದ ಲೋಪ ಬರುತ್ತದೆ. उಕಾರದ ಹಿಂದೆ ಸಂಯುಕ್ತವ್ಯಂಜನವಿದ್ದರೆ, ಈ ಕಾರ್ಯವಾಗುವದಿಲ್ಲ.

ಉದಾ: चिनुवः ಅಥವಾ चिन्वः, चिनुमः ಅಥವಾ चिन्मः, चिनुवहे ಅಥವಾ चिन्वहे, चिनुमहे ಅಥವಾ चिन्महे ಎಂಬ ಎರಡು ರೂಪಗಳು; आप्नुवः, आप्नुमः ಎಂಬೊಂದೊಂದೇ ರೂಪವು. आप्नु ಇದರಲ್ಲಿ ಅಂತ್ಯ उಕಾರದ ಹಿಂದೆ प ಸಂಯುಕ್ತ ವ್ಯಂಜನವಿರುವದರಿಂದ ಆ उಕಾರಕ್ಕೆ ಲೋಪ ಬರುವದಿಲ್ಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | चिनुते | चिन्वाते | चिन्वते |
| ಮ. ಪು. | चिनुषे | चिन्वाथे | चिनुध्वे |
| ಉ. ಪು. | चिन्वे | चिनुवहे / चिन्वहे | चिनुमहे / चिन्महे |

ಎಲ್ಲ ಪ್ರತ್ಯಯಗಳು ದುರ್ಬಲವಿರುವದರಿಂದ ಅಂತ್ಯಸ್ವರಕ್ಕೆ ಗುಣವಾಗಿ चिनो ಎಂಬ ರೂಪವು ಎಲ್ಲಿಯೂ ಆಗಲಿಲ್ಲ.

आप् (ಪ.) ಹೊಂದು, ದೊರಕಿಸಿಕೊಳ್ಳು, ಪಡಿ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | आप्नोति | आप्नुतः | आप्नुवन्ति |
| ಮ. ಪು. | आप्नोषि | आप्नुथः | आप्नुथ |
| ಉ. ಪು. | आप्नोमि | आप्नुवः | आप्नुमः |

(ಬ) ಸ್ವರಾದಿ ದುರ್ಬಲಪ್ರತ್ಯಯಗಳು ಪರವಾಗಲು ವ್ಯಂಜನಾಂತ ಧಾತುಗಳ ಮೇಲೆ ಸೇರಿದ नु ವಿಕರಣದ उಕಾರದ ಮುಂದೆ वಕಾರಾಗಮ ಬರುವದು. ಆದದರಿಂದ आप्+नु+अन्ति =आप्नु+अन्ति=आप्नुव्+अन्ति=आप्नुवन्ति.

## ೮ನೇ ಗಣ.

तन् (ಉಭ.) ಹಿಗ್ಗು, ಹಿಗ್ಗಿಸು, ಚಾಚು, ಯಜ್ಞಮಾಡು.

ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | तनोति | तनुतः | तन्वन्ति |
| ಮ. ಪು. | तनोषि | तनुथः | तनुथ |
| ಉ. ಪು. | तनोमि | तनुवः / तन्वः | तनुमः / तन्मः |

### ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | तनुते | तन्वाते | तन्वते |
| ಮ. ಪು. | तनुषे | तन्वाथे | तनुध्वे |
| ಉ. ಪು. | तन्वे | तनुवहे / तन्वहे | तनुमहे / तन्महे |

೧೪ನೇ ಪುಟದಲ್ಲಿ ಹೇಳಿದ (ಅ) ನಿಯಮದಿಂದ तनुवः ಅಥವಾ तन्वः ಇತ್ಯಾದಿ ರೂಪಗಳಾಗುತ್ತವೆ.

೯. कृ ಮಾಡು, ೮ನೇ ಗಣ ಪರ. ಮತ್ತು ಆತ್ಮ.; ಸಾರ್ವಧಾತುಕ ಆಖ್ಯಾತ ಪ್ರತ್ಯಯಗಳಲ್ಲಿ ಸಬಲಪ್ರತ್ಯಯಗಳು ಪರವಾಗಲು ಇದರ ರೂಪವು कर् ಎಂತಲೂ ದುರ್ಬಲಪ್ರತ್ಯಯಗಳು ಪರವಾಗಲು कुर् ಎಂತಲೂ ಆಗುತ್ತದೆ. ಉದಾ:

### ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | करोति | कुरुतः | कुर्वन्ति |
| ಮ. ಪು. | करोषि | कुरुथः | कुरुथ |
| ಉ. ಪು. | करोमि | कुर्वः[1] | कुर्मः |

### ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | कुरुते | कुर्वाथे | कुर्वते |
| ಮ. ಪು. | कुरुषे | कुर्वाते | कुरुध्वे |
| ಉ. ಪು. | कुर्वे | कुर्वहे | कुर्महे |

यज्ञेषु सोमं सुन्वतेऽध्वर्यवः ।
प्रत्यहं प्रातरुत्थायोपवनं च गत्वा पुष्पाण्यत्रचिनोमि ।
महात्मनां यशांसि दिक्षु प्रतन्वन्ति कवयः ।
दुःखपीडितामपि मां हृदयमर्मच्छिद्भिर्वचनैः किं पुनर्दुनोषि ।
द्वाःस्थौ पुरुषौ राजकुलस्य द्वारमपावृण्वाते ।
पुण्यकृतः स्वेषां सुचरितानां फलं स्वर्गलोकेऽश्नुवते ।

---

[1] व, मಕಾರಾದಿಪ್ರತ್ಯಯಗಳ ಹಿಂದಿನ कृ ಧಾತುವಿನ ವಿಕರಣದ उಕಾರಕ್ಕೆ ೧೪ನೇ ಪುಟದ (ಅ) ನಿಯಮದಲ್ಲಿ ಹೇಳಿದ ಲೋಪವು ನಿತ್ಯವಾಗಿ ಬರುವದು.

आर्याः संसारसुखानि त्यक्त्वा किमर्थमरण्यवासमङ्गीकुरुध्वे ।
श्रुतिमनोहरांश्चित्रालापाञ्शृण्मः ।
आकाशं मेघा वृण्वते ।
हे जगन्नायक न वयं चर्मचक्षुषा तव विभूतिमुपवीक्षितुं शक्नुमः ।
यत्त्वं कुरुषे तदन्यथा विधातुं कः शक्नोति ।
केनापि रक्षसा हृतमस्माकं तुरगं वयं विचिनुमः ।
वारंवारमीश्वरस्याराधनां साधवः कुर्वन्ति ।
सत्कृतिर्मनुष्यस्य कीर्तिं सर्वेषु देशेषु तनोति ।
दुरापमपि लोकेऽस्मिन् यद्यद्वस्त्वभिवाञ्छति ।
तत्तदाप्नोति मेधावी तस्मात्कार्यः समुद्यमः ॥
[1]न दुनोति दयालुत्वाद्वचसा कंचिदप्यसौ ।
दुरुक्तैरपि दीनानां मनस्तस्य न दूयते ।
सोमं सुनोति यज्ञेषु सोमवंशविभूषणः ।
पुरः स्रवति संग्रामे स्यन्दनं स्वयमेव सः ॥८

ನೀವು ನಿಮ್ಮ ಮನೋವಿಕಾರಗಳನ್ನು ಗೆಲ್ಲಲಾರಿರಿ (शक्).

ನಾವು ಪ್ರತಿ ವರ್ಷ ಕಾಶೀಯಾತ್ರೆಯನ್ನು ಮಾಡುತ್ತೇವೆ (कृ).

ಚಾತಕಪಕ್ಷಿಯು ನೀರು ಬೇಡುತ್ತದೆ (वन्); ಆದರೆ ಅದಕ್ಕೆ ನೀರು ದೊರೆಯುವದಿಲ್ಲ (आप्).

ನಾನು ಹೇಳುವದನ್ನು ನೀನು ಕೇಳುತ್ತೀಯೋ (श्रु)?

ಆ ವಿಚಾರವನ್ನು ನಾನು ಆಡಿ ತೋರಿಸುವದಿಲ್ಲ (वि+वृ); ಯಾಕಂದರೆ ಅದು ಪಾಪವುಳ್ಳದ್ದಿರುವದು.

ಅರಮನೆಯ ಬಾಗಿಲುಗಳನ್ನು ನಾನು ಇಕ್ಕುತ್ತೇನೆ (सम्+वृ).

ಆ ಇಬ್ಬರು ಶಿಕ್ಷಕರು ತಮ್ಮ ಶಿಷ್ಯರಿಗೆ ನ್ಯಾಯದ ತತ್ವಗಳನ್ನು ತಿಳಿಸಿ ಹೇಳುತ್ತಾರೆ (वि+वृ).

ಹಾಗೆ ಮಾಡುವದರಿಂದ[2] ನೀನು ನಿನ್ನ ಕೀಳತನವನ್ನು ಮಾತ್ರ ವ್ಯಕ್ತ ಮಾಡುತ್ತೀ (आविस्+कृ).

---

1) ಈ ಎರಡು ಪದ್ಯಗಳು ಕೃಷ್ಣನೆಂಬ ಅರಸನ ಸ್ತುತಿಪರವಾಗಿರುತ್ತವೆ.

2) ಇಲ್ಲಿ 'ಮಾಡುವಂಥ ನೀನು' ಎಂಬದಾಗಿ ವರ್ತಮಾನಕಾಲ ಕೃದ್ವಾಚಿಯನ್ನು ಉಪಯೋಗಿಸತಕ್ಕದು.

ಲೋಭಿಗಳು ಹಣವನ್ನು ಕೂಡ ಹಾಕುತ್ತಾರೆ (**सम्+चि**).

ವಿವೇಕಿಗಳು ತಮ್ಮ ಕಾರ್ಯಗಳನ್ನು ಸುಲಭವಾಗಿ ಕಡೆಗಾಣಿಸುತ್ತಾರೆ (**साध्**).

ನಾನು ಒಂದು ಪಶುವನ್ನು ನೋಡಿದೆನು; ಅದಕ್ಕೊಂದು ದಪ್ಪವಾದ ಬಾಲವುಂಟು; ಅದನ್ನು ಅದು ಯಾವಾಗಲೂ ಅಲ್ಲಾಡಿಸುತ್ತದೆ (**धु**).

## ಕೋಶ ೨.

### ೫ನೇ ಗಣದ ಧಾತುಗಳು.

**अश्** (ಆ.) ಭೋಗಿಸು, ವ್ಯಾಪಿಸು.
**आप्** (ಪ.) ಸಂಪಾದಿಸು, ಹೊಂದು.
**चि** (ಪ. ಆ.) ಕೂಡಿಸು (**वि+चि** ಹುಡುಕು, ಶೋಧಿಸು: **सम्+चि** ಸಂಗ್ರಹಿಸು).
**दु** (ಪ.) ದುಃಖ ಪಡಿಸು, ಪೀಡಿಸು.
**धु, धू** (ಪ. ಆ.) ಅಲ್ಲಾಡಿಸು, ಜಾಡಿಸು.
**धृष्** (ಪ.) ಯುದ್ಧಕ್ಕೆ ಕರಿ.
**वृ** (ಪ. ಆ.) ಮುಚ್ಚು; **अप+आ+वृ** ತೆರಿ.
**वि+वृ** ತಿಳಿಸಿ ಹೇಳು, ಅದಿ ತೋರಿಸು; **सम्+वृ** ಮುಚ್ಚು; **आ+वृ** (ಬಿಗಿ ಹಿಡಿ, ಅಂಕೆಯಲ್ಲಿಡು, ಹೊದಿಸು).
**शक्** (ಪ.) ಸಮರ್ಥನಾಗು.
**श्रु** [**शृ**] (ಪ.) ಕೇಳು.
**साध्** (ಪ.) ಸಾಧಿಸು, ಕಡೆಗಾಣಿಸು.
**सु** (ಪ. ಆ.) ರಸ ಹಿಂಡು.

### ೮ನೇ ಗಣದ ಧಾತುಗಳು.

**कृ** (ಪ. ಆ.) ಮಾಡು; **वशी+कृ** ಗೆಲ್ಲು, ಒಲಿಸಿಕೊಳ್ಳು; **अङ्गी+कृ** ಸ್ವೀಕರಿಸು, ಆಶ್ರಯಿಸು; **आविस्+कृ** ವ್ಯಕ್ತಪಡಿಸು, ತೆರೆವಿಡು, ತೋರಿಸು; **तिरस्+कृ** ಜರಿ, ತಾತ್ಸಾರ ಮಾಡು; **प्रति+कृ** ಸೇಡು ತೀರಿಸು, ಅಡ್ಡಿ ಮಾಡು.
**तन्** (ಪ. ಆ.) ಹಿಗ್ಗು, ಹಿಗ್ಗಿಸು, ಚಾಚು, ಯಜ ಮಾಡು; **प्र+तन्** ವಿಸ್ತಾರವಾಗು.
**वन्** (ಆ.) ಬೇಡು, ಯಾಚಿಸು.

---

**अध्वर्यु** (ಪು.) ಯಜ್ಞದಲ್ಲಿ ಆಹುತಿ ಹಾಕುವವನು.
**अन्यथा** (ಅ.) ಬೇರೆ ತರವಾಗಿ, ಇಲ್ಲದಿದ್ದರೆ.
**अरण्यवास** (ಪು.) [**अरण्य** (ನ.) ಅಡವಿ, **वास** (ಪು.) ಇರೋಣ] ಅಡವಿಯಲ್ಲಿ ಇರೋಣ.
**आराधना** (ಸ್ತ್ರೀ.) ಸತ್ಕಾರ, ಪೂಜೆ.
**कार्य** (ವಿ.) ಮಾಡತಕ್ಕ, ಮಾಡಲಿಕ್ಕೆ ಯೋಗ್ಯವಾದ.
**चर्मचक्षुस्** (ನ.) [**चर्मन्** (ನ.) ತೊಗಲು, **चक्षुस्** (ನ.) ಕಣ್ಣು] ತೊಗಲಿನ ಕಣ್ಣು.
**चित्रालाप** (ಪು.) [**चित्र** ವಿಧವಿಧದ, ತರತರದ, **आलाप** (ಪು.) ಭಾಷಣ] ವಿಧವಿಧದ ಭಾಷಣ.
**जगन्नायक** (ಪು.) [**जगत्** (ನ.) ಲೋಕ, **नायक** (ಪು.) ಒಡೆಯ] ಲೋಕದ ಒಡೆಯ.
**तुरग** (ಪು.) ಕುದುರೆ.
**दयालुत्व** (ನ.) ದಯೆ, ಕೃಪೆ

**दीन** (ವಿ.) ಬಡವ, ದರಿದ್ರ, ಕಂಗಾಲ.
**दुःखपीडित** (ವಿ.) ದುಃಖದಿಂದ ನೊಂದ.
**दुराप** (ವಿ.) ದುಃಸಾಧ್ಯ, ದುರ್ಲಭ.
**दुरुक्त** (ನ.) ಕೆಟ್ಟ ನುಡಿ, ಅಸ್ಪಷ್ಟವಾಗಿ ನುಡಿದ ಮಾತು.
**दू** (೪ನೇ ಗ. ಆ.) ಖೇದ ಪಡು, ಸಂತಾಪ ಪಡು.
**द्वाःस्थ** (ವಿ.) ಬಾಗಿಲ ಕಾಯುವವ.
**द्वार** (ನ.) ಬಾಗಿಲು.
**पुण्यकृत्** (ವಿ.) [**पुण्य** (ನ.) ಸುಕೃತ, ಒಳ್ಳೇ ಕೆಲಸ; **कृत्** (**कृ**) ಮಾಡುವ] ಪುಣ್ಯ ಮಾಡುವವ.
**पुरस्** (ಅ.) ಮುಂಭಾಗದಲ್ಲಿ.
**प्रत्यहम्** (ಅ.) [**प्रति** (ಅ.) **अहन्** (ನ.) ದಿವಸ] ಪ್ರತಿ ದಿವಸ, ದಿನಾಲು.
**यज्ञ** (ಪು.) ಯಾಗ, ಕ್ರತು.
**राजकुल** (ನ.) [**राजन्** (ಪು.) **कुल** (ನ.) ಮನೆ, ವಾಡೆ] ಅರಮನೆ.
**वारंवारम्** (ಅ.) ಮೇಲಿಂದ ಮೇಲೆ.
**विभूति** (ಸ್ತ್ರೀ.) ಸಾಮರ್ಥ್ಯ, ದೊಡ್ಡಸ್ತಿಕೆ.
**श्रुतिमनोहर** (ವಿ.) [**श्रुति** (ಸ್ತ್ರೀ.) ಕಿವಿ, **मनोहर** (ವಿ.) ಇಂಪಾದ] ಕಿವಿಗೆ ಇಂಪಾದ.
**संग्राम** (ಪು.) ಯುದ್ಧ, ಕದನ, ಜಗಳ.
**संसारसुख** (ನ.) **संसार** (ಪು.) ಪ್ರಪಂಚ, **सुख** (ನ.) ಪ್ರಪಂಚದ ಸುಖ.
**सत्कृति** (ಸ್ತ್ರೀ.) ಪುಣ್ಯದ ಕೆಲಸ, ಸತ್ಕಾರ.
**समुद्यम** (ಪು.) ಉದ್ಯೋಗ.
**सृ** (೬ನೇ ಗ. ಪ.) ಮುಂದಕ್ಕೆ ನೂಕು, ಮುಂದಕ್ಕೆ ನಡಿಸು.
**सोमवंशविभूषण** (ವಿ.) [**सोम** (ಪು.) ಚಂದ್ರ] ಚಂದ್ರವಂಶಕ್ಕೆ ಭೂಷಣನಾದಂಥ.
**स्यन्दन** (ಪು.) ರಥ.
**स्वयम्** (ಅ.) ತಾನೇ.
**हृदयमर्मच्छिद्** (ವಿ.) [**हृदय** (ನ.) ಎದೆಗುಂಡಿಗೆ, **मर्मन्** (ನ.) ಪ್ರಾಣಸ್ಥಾನ, **छिद्** ಕೊಯ್ಯು] ಹೃದಯದ ಆಯಸ್ಥಾನ ಕಡಿಯುವವ.

---

ತತ್ವ **नय** (ಪು.), **तत्त्व**.
ಯಾಕಂದರೆ **यतः** (ಅ.), **हि** (ಅ.).
ಯಾವಾಗಲೂ **अनिशम्** (ಅ.).
ಸುಲಭತ್ವ **सौकर्य** (ನ.).
ಪ್ರತಿವರ್ಷ **प्रतिसंवत्सरम्** (ಅ.).
ಕಾದಲಿಕ್ಕೆ **युद्धाय**, **योद्धुम्**, **युद्धे**.
ಬಾಗಿಲು **द्वार** (ನ.), **तोरण** (ಪು. ನ.).
ಶಿಕ್ಷಕ **अध्यापक** (ಪು.).
ಕೀಳುತನ **लघुता** (ಸ್ತ್ರೀ.).
ಮನೋಧರ್ಮ **मनोधर्म** (ಪು.), **इन्द्रियवृत्ति** (ನ.), **इन्द्रिय** (ನ.).
ಜೀನ, ಲೋಭಿ **कदर्य** (ಪು.).
ತನ್ನ, ಸ್ವಂತ **स्वीय** (ವಿ.).
ತೀರ್ಥಾಟನ **तीर्थयात्रा** (ಸ್ತ್ರೀ.), **यात्रा** (ಸ್ತ್ರೀ.).
ಜಾಣ, ಧೂರ್ತ **दूरदर्शिन्** (ವಿ.), **चतुर** (ವಿ.).
ಕೆಲಸ, ಉದ್ಯೋಗ **कार्य** (ನ.).
ಪಾಪವುಳ್ಳ, ದುಷ್ಟ **पाप** (ವಿ.).
ದಪ್ಪ **स्थूल** (ವಿ.), **विपुल** (ವಿ.).
ಆಲೋಚನೆ **संकल्प** (ಪು.).

# ೩ನೇ ಪಾಠ.

## ೫ನೇ ಮತ್ತು ೮ನೇ ಗಣಗಳು (ಮುಂದೆ ಸಾಗಿದ್ದು).

### ಅನದ್ಯತನಭೂತಕಾಲ.

೧. ಪರಸ್ಮೈಪದಪ್ರತ್ಯಯಗಳು ಮೊದಲನೆಯ ವರ್ಗದ ಧಾತುಗಳಿಗೆ ಹೇಳಿದವೇ ಈ ಗಣಗಳ ಧಾತುಗಳಿಗೆ ಸೇರುವವು. ಆತ್ಮನೇಪದಪ್ರತ್ಯಯಗಳಾದರೂ ಆ ವರ್ಗಕ್ಕೆ ಹೇಳಿದವೇ; ಆದರೆ इताम्, इथाम् ಎಂಬ ಪ್ರತ್ಯಯಗಳಲ್ಲಿ इಕಾರಕ್ಕೆ आಕಾರ ಬರುವದು, [೧೪ನೇ ಪುಟದ ೭ (ಅ) ನಿಯಮ ನೋಡು]; ಮತ್ತು ಪ್ರಥಮ ಪುರುಷ ಬಹುವಚನದ ಪ್ರತ್ಯಯದೊಳಗಿನ न್ಕ್ಕೆ ಲೋಪ ಬರುವದು. ಸಾರಾಂಶ, ಆ ಪ್ರತ್ಯಯಗಳು ಕೆಳಗೆ ವಿವರಿಸಿದಂತೆ ಇರುವವು:—

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | त | आताम् | अत |
| ಮ. ಪು. | थास् | आथाम् | ध्वम् |
| ಉ. ಪು. | इ | वहि | महि |

### ೫ನೇ ಗಣ.

आप् (ಪ.) ಹೊಂದು, ಪಡೆ, ಸಂಪಾದಿಸು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | आप्नोत् | आप्नुताम् | आप्नुवन् |
| ಮ. ಪು. | आप्नोः | आप्नुतम् | आप्नुत |
| ಉ. ಪು. | आप्नवम् | आप्नुव | आप्नुम |

अश् (ಆ.) ವ್ಯಾಪಿಸು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | आश्नुत | आश्नुवाताम् | आश्नुवत |
| ಮ. ಪು. | आश्नुथाः | आश्नुवाथाम् | आश्नुध्वम् |
| ಉ. ಪು. | आश्नुवि | आश्नुवहि | आश्नुमहि |

ಅನದ್ಯತನಭೂತದ ಪರಸ್ಮೈಪದೈಕವಚನದ ಪ್ರತ್ಯಯಗಳು ಸಬಲವಾಗಿರುವದರಿಂದ ಅವುಗಳ ಹಿಂದಿನ उಕಾರಕ್ಕೆ ಗುಣವಾಗಿದೆ (ಪುಟ ೧೩ ನಿಯಮ ೬ ನೋಡು); ಮತ್ತು ಹಿಂದೆ ೧೫ನೇ ಪುಟದಲ್ಲಿ ಹೇಳಿದ (ಬ) ನಿಯಮಕ್ಕನುಸಾರವಾಗಿ आप्नु+अन् = आप्नुवन्, आश्नु+इ=आश्नुवि, आश्नु+आथाम् = आश्नुवाथाम् ಎಂಬ ರೂಪಗಳಾಗಿರುವವು.

चि (ಆ.) ಕೂಡಿಸು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अचिनुत | अचिन्वाताम् | अचिन्वत |
| ಮ. ಪು. | अचिनुथाः | अचिन्वाथाम् | अचिनुध्वम् |
| ಉ. ಪು. | अचिन्वि | अचिनुवहि<br>अचिन्वहि | अचिनुमहि<br>अचिन्महि |

## ೮ನೇ ಗಣ.

तन् (ಉಭ.) ಹಬ್ಬು.

ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अतनोत् | अतनुताम् | अतन्वन् |
| ಮ. ಪು. | अतनोः | अतनुतम् | अतनुत |
| ಉ. ಪು. | अतनवम् | अतनुव<br>अतन्व | अतनुम<br>अतन्म |

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अतनुत | अतन्वाताम् | अतन्वत |
| ಮ. ಪು. | अतनुथाः | अतन्वाथाम् | अतनुध्वम् |
| ಉ. ಪು. | अतन्वि | अतनुवहि<br>अतन्वहि | अतनुमहि<br>अतन्महि |

ಆತ್ಮನೇಪದ.

अचिन्वहि, अतन्वि, अतन्वहि ಇತ್ಯಾದಿ ರೂಪಗಳಿಗಾಗಿ ಪುಟ ೧೪ ನಿಯಮ ೮ (ಅ) ನೋಡು.

कृ (ಉಭ.) ಮಾಡು ಧಾತುವಿನ ರೂಪಗಳು.

ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अकरोत् | अकुरुताम् | अकुर्वन् |
| ಮ. ಪು. | अकरोः | अकुरुतम् | अकुरुत |
| ಉ. ಪು. | अकरवम् | अकुर्व | अकुर्म |

आत्मनेपद.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अकुरुत | अकुर्वाताम् | अकुर्वत |
| ಮ. ಪು. | अकुरुथाः | अकुर्वाथाम् | अकुरुध्वम् |
| ಉ. ಪು. | अकुर्वि | अकुर्वहि | अकुर्महि |

೧೬ನೇ ಪುಟದಲ್ಲಿ ೯ನೇ ನಿಯಮವನ್ನೂ ಅದೇ ಪುಟದ ಕೆಳಗಿನ [1] ಟಿಪ್ಪಣಿಯನ್ನೂ ನೋಡು.

देवा वै यज्ञमतन्वत तांस्तन्वानानसुरा अभ्यगच्छन् ।

हे संजय कुरुक्षेत्रे मामकाः पाण्डवाश्च किमकुर्वत तत्कथय ।

रामादीनानेतुं दूतानयोध्यां प्राहिणोज्जनकः ।

एकस्मिन्निबिडेऽरण्ये वसन्फलमूलादीनामशनेन वृत्तिमकुर्वि ।

कथय नो याः कथा वृद्धेऽभ्यस्त्वमशृणोः

रामं युद्धेऽधृष्णुवन्राक्षसाः

उद्यमं कुर्वन्नपि फलं नैवाप्नवं तस्माद्भवितव्यतैवात्रोपालभ्या ।

ईदृशैः कर्मभिर्महत्पुण्यं त्वं समचिनुथाः ।

भो भो अध्वर्यवः सोमं यूयमसुनुध्वं न वेति पृच्छति होता ।

रामलक्ष्मणौ सीतामरण्येऽन्विष्यन्तौ महान्तं कालं[1] समीहितं नैवाप्नुवाताम् ।

आपतिता आपदः प्रत्यकुर्म भवतां साहाय्येन ।

ಅರಸನ ಹಗೆಗಳು ಅವನನ್ನು ಕಾದಲಿಕ್ಕೆ ಕರೆದರು (धृष्).

ದಶರಥನು ಸರಯೂ ತೀರದಲ್ಲಿ ಯಜ್ಞ ಮಾಡಿದನು (तन्).

ಅರಸನ ಮಂತ್ರಿಗಳು ಹಗೆಗಳ ವ್ಯಾಪಾರವನ್ನು ಎಚ್ಚರದಿಂದ ತಿಳಿದುಕೊಳ್ಳುವದಕ್ಕೋಸ್ಕರ ನನ್ನನ್ನು ಕಳುಹಿದರು (प्र+हि).

ಆ ಕೋಟೆಯ ಬಾಗಿಲುಗಳನ್ನು ನಾವು ತೆರೆದೆವು (अपा+वृ).

ನೀನು ಮಾಡಿದ ಕೃತ್ಯವು ನಿನ್ನ ಸ್ನೇಹಿತರನ್ನು ಈಗಲೂ ಕ್ಲೇಶಪಡಿಸುತ್ತದೆ (दु).

ಪರ್ವತದ ಶಿಖರಕ್ಕೆ ಏರುವದು ನನ್ನಿಂದ ಆಗಲಿಲ್ಲ (शक्).

ಕಳೆದು ಹೋದ ಪುಸ್ತಕಗಳನ್ನು ನೀನು ಎಲ್ಲಿ ಹುಡುಕಿದೆ (वि+चि)?

---

[1] ಅವಧಿವಾಚಕನಾಮಗಳಿಗೆ ದ್ವಿತೀಯಾವಿಭಕ್ತಿ ಬರುವದು.

ಆ ಇಬ್ಬರು ಹುಡುಗಿಯರು ನಿನ್ನೆ ತೋಟದಲ್ಲಿ ತಮ್ಮ ಸಲುವಾಗಿ ಹೂಗಳನ್ನು ಕೊಯ್ಕೊಂಡರು (अव+चि)[1].

ಅವರು ಕಾಮ ಕ್ರೋಧ ಲೋಭಗಳನ್ನು ಬಿಗಿಹಿಡಿದು (आ+वृ), ಬ್ರಹ್ಮವನ್ನು ಚಿಂತಿಸಿ, ಅಕ್ಷಯ ಸುಖವನ್ನು ಹೊಂದಿದರು (आप्).

ಬಭ್ರುವಾಹನನು ಅರ್ಜುನನ ಎದೆಯಲ್ಲಿ ಬಾಣದಿಂದ ಗಾಯ ಮಾಡಿದನು (क्षण्, क्षिण्).

ಕಾಳಗದಲ್ಲಿ ಬಂಟರ ಕುದುರೆಗಳು ಕೊಲ್ಲಲ್ಪಟ್ಟವು; ಆದರೆ ಅವರು ಬೇರೆ ಕುದುರೆಗಳನ್ನು ಸಂಪಾದಿಸಿ (आप्) ಪುನಃ ಯುದ್ಧ ಮಾಡಿದರು (कृ).

ನೀನೂ ರಾಮನೂ ಪಾಪ ಮಾಡಿದಿರಿ (कृ), ಅದರ ನಿಮಿತ್ತ ನೀವಿಬ್ಬರೂ ಶಿಕ್ಷೆಗೆ ಪಾತ್ರರಾಗುತ್ತೀರಿ.

## ಕೋಶ ೭.

**क्षण्, क्षिण्** (೮ನೇ ಗ. ಪ.) ಗಾಯಮಾಡು.
**हि** (೫ನೇ ಗ. ಪ.) ಹೋಗು; (**प्र+हि**) ಕಳಿಸು.

**अन्विष्यत्** [**अनु+इष्** (೪ನೇ ಗ. ಪ. ಧಾತು ವಿನ ವರ್ತಮಾನ ಕೃದಂತ] ಹುಡುಕುತ್ತ.
**अशन** (ನ.) ತಿನ್ನೋಣ, ಭಕ್ಷ್ಯ, ಭಕ್ಷಣ.
**ईदृश** (ವಿ.) ಈ ಪ್ರಕಾರದ, ಇದರಂಥ.
**उपालभ्य** (ವಿ.) ದೂಷಿಸತಕ್ಕ, ಜರಿಯತಕ್ಕ.
**कुरुक्षेत्र** (ನ.) ಕೌರವ ಪಾಂಡವರಿಗೆ ಯುದ್ಧವಾದ ಸ್ಥಲ.
**अभिगम्** ಮೈಮೇಲೆ ಬೀಳು, ದಾಳಿಮಾಡು.
**निबिड** (ವಿ.) ಒತ್ತಾದ, ದಟ್ಟ.
**फलमूलादि** (ವಿ.) [**मूल** (ನ.) ಗಡ್ಡೆ] ಕಾಯಿ, ಗಡ್ಡೆ ಮುಂತಾದ.
**भवितव्यता** (ಸ್ತ್ರೀ.) ದೈವ, ಹಣೆಬರಹ.
**मामक** (ವಿ.) ನನ್ನ.
**रामादि** (ಪು.) [**राम** ಒಬ್ಬ ಪುರುಷನ ಹೆಸರು, **आदि** (ವಿ.) ಮೊದಲು] ರಾಮನನ್ನು ಮೊದಲ್ಗೊಂಡು ಕೆಲವು ಜನರು.
**वृत्ति** (ಸ್ತ್ರೀ.) ಉಪಜೀವನ, ಬದುಕು.
**वृद्ध** (ವಿ.) ಮುದಿ, ಪ್ರಾಚೀನ.
**वै** (ಅ.) ಪಾದಪೂರಣಾರ್ಥಕ ಅವ್ಯಯ.
**संजय** (ಪು.) ಒಬ್ಬ ಮನುಷ್ಯನ ಹೆಸರು.
**समीहित** (ವಿ.) ಕೋರಿದ, ಇಚ್ಛಿಸಿದ.
**साहाय्य** (ನ.) ಸ್ನೇಹ, ನೆರವು.
**हे** (ಅ.) ಎಲಾ, ಎಲೇ.
**होतृ** (ಪು.) ಯಜ್ಞದಲ್ಲಿ ಮಂತ್ರ ಹೇಳುವವನು.

ಅಕ್ಷಯ **शाश्वत**.
ಕೋಟೆ **दुर्ग** (ನ.).
ಅತ್ಯಾಶೆ **लोभ** (ಪು.).
ಕೊಲ್ಲಲ್ಪಟ್ಟ **हत** (ವಿ.).
ಕಳೆದ, ಕಳೆದುಹೋದ **नष्ट**.
ಶಿಕ್ಷೆ, ಶಾಸನ **दण्ड** (ಪು.).

---

1) ಇಲ್ಲಿ ಆತ್ಮನೇಪದವನ್ನು ಪ್ರಯೋಗಿಸತಕ್ಕದ್ದು. ಪರರ ಸಲುವಾಗಿ ಕೊಯ್ದಿದ್ದರೆ ಪರಸ್ಮೈಪದ ಬರುತ್ತಿತ್ತು. ಕರ್ತೃವೇ ಕ್ರಿಯೆಯ ಫಲವನ್ನು ಅನುಭೋಗಿಸಿದರೆ, ಉಭಯಪದಧಾತುಗಳಿಗೆ ಆತ್ಮನೇಪದಪ್ರತ್ಯಯಗಳನ್ನು ಹಚ್ಚಬೇಕು; ಅದನ್ನು ಕರ್ತೃವಲ್ಲದ ಬೇರೆ ಯಾರಾದರೂ ಅನುಭೋಗಿಸಿದರೆ, ಪರಸ್ಮೈಪದಪ್ರತ್ಯಯಗಳನ್ನು ಹಚ್ಚಬೇಕು.

ಬಭ್ರುವಾಹನ **बभ्रुवाहन** (ಪು.).
ಕಾಮ **काम** (ಪು.).
ಸುಖ **सुख** (ನ.).
ನಷ್ಟ **नष्ट** (ವಿ.)
ಕೆಲಸ **व्यापार** (ಪು.)

ಸರಯೂ, ಅಯೋಧ್ಯೆಯೊಳಗಿನದೊಂದು ನದಿ **सरयू** (ಸ್ತ್ರೀ).
ಎಚ್ಚರದಿಂದ ತಿಳುಕೊಳ್ಳಲಿಕ್ಕೆ **निरूपयितुम्** [**निरूप्** (೧೦ನೇ ಗ.) ಧಾತುವಿನ ಹೇತ್ವರ್ಥಕ ಅವ್ಯಯ.]

## ೪ನೇ ಪಾಠ.

### ೫ನೇ ಮತ್ತು ೮ನೇ ಗಣಗಳು (ಮುಂದೆ ಸಾಗಿದ್ದು).

### ಪರಸ್ಮೈಪದ.

### ಆಜ್ಞಾರ್ಥ.

೧. ಎರಡನೆಯ ವರ್ಗದ ಧಾತುಗಳ ಆಜ್ಞಾರ್ಥ ಮಧ್ಯಮಪುರುಷೈಕವಚನ ಪ್ರತ್ಯಯವು **हि**. ಸ್ವರಾಂತ ೫ನೇ ಗಣದ ಧಾತುಗಳ ಮುಂದೆಯೂ, ೮ನೇ ಗಣದ ಧಾತುಗಳ ಮುಂದೆಯೂ ಈ **हि** ಪ್ರತ್ಯಯಕ್ಕೆ ಲೋಪ ಬರುವದು.

ಆಜ್ಞಾರ್ಥ ಪರಸ್ಮೈಪದಪ್ರತ್ಯಯಗಳು ಯಾವವಂದರೆ:—

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | **तु** | **ताम्** | **अन्तु** |
| ಮ. ಪು. | **हि** | **तम्** | **त** |
| ಉ. ಪು. | **आनि** | **आव** | **आम** |

**आप्** (೫ನೇ ಗಣ ಪ.).

| | | | |
|---|---|---|---|
| ಪ್ರ. ಪು. | **आप्नोतु** | **आप्नुताम्** | **आप्नुवन्तु** |
| ಮ. ಪು | **आप्नुहि** | **आप्नुतम्** | **आप्नुत** |
| ಉ. ಪು. | **आप्नवानि** | **आप्नवाव** | **आप्नवाम** |

**सु** (೫ನೇ ಗಣ. ಪ.) ರಸ ಹಿಂಡು.

| | | | |
|---|---|---|---|
| ಪ್ರ. ಪು. | **सुनोतु** | **सुनुताम्** | **सुन्वन्तु** |
| ಮ. ಪು. | **सुनु** | **सुनुतम्** | **सुनुत** |
| ಉ. ಪು. | **सुनवानि** | **सुनवाव** | **सुनवाम** |

ಇದರಲ್ಲಿ ಉತ್ತಮಪುರುಷಪ್ರತ್ಯಯಗಳೆಲ್ಲ ಸಬಲವಾದದರಿಂದ **नु**ಕ್ಕೆ ಗುಣವಾಗಿ **नो** ಆಗುತ್ತದೆ. ಅದರ ಮುಂದೆ **आनि, आव, आम** ಪ್ರತ್ಯಯಗಳು ಬರಲು, ಅದಕ್ಕೆ **नव्** ಆದೇಶವಾಗುತ್ತದೆ. ಈ ಮೇರೆಗೆ ಮೇಲೆ ಹೇಳಿದ ರೂಪಗಳು ಸಿದ್ಧವಾಗುತ್ತವೆ.

ಮಧ್ಯಮಪುರುಷೈಕವಚನವೂ ಪ್ರಥಮ ಮಧ್ಯಮಪುರುಷಗಳ ದ್ವಿಬಹು ವಚನಗಳೂ ದುರ್ಬಲ.

ವಿಧ್ಯರ್ಥ.

೨. ಅನದ್ಯತನಭೂತಕಾಲದ ಪ್ರತ್ಯಯಗಳ ಪೂರ್ವದಲ್ಲಿ या ಆಗಮ ಸೇರಲು, ವಿಧ್ಯರ್ಥದ ಪರಸ್ಮೈಪದಪ್ರತ್ಯಯಗಳಾಗುವವು. ಪ್ರಥಮಪುರುಷ ಬಹುವಚನದ ಪ್ರತ್ಯಯವು ಮಾತ್ರ युस्. ಆ ಪ್ರತ್ಯಯಗಳು ಯಾವವೆಂದರೆ:

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | यात् | याताम् | युस् |
| ಮ. ಪು. | यास् | यातम् | यात |
| ಉ. ಪು. | याम् | याव | याम |

चि (೫ನೇ ಗಣ ಪ.).

| | | | |
|---|---|---|---|
| ಪ್ರ. ಪು. | चिनुयात् | चिनुयाताम् | चिनुयुः |
| ಮ. ಪು. | चिनुयाः | चिनुयातम् | चिनुयात |
| ಉ. ಪು. | चिनुयाम् | चिनुयाव | चिनुयाम |

ಈ ಯಾವತ್ತು ಪ್ರತ್ಯಯಗಳು ದುರ್ಬಲವಾದದರಿಂದ ಅಂಗದ ಅಂತ್ಯಸ್ವರಕ್ಕೆ ಗುಣವಾಗಲಿಲ್ಲ.

ಆತ್ಮನೇಪದ.

ಆಜ್ಞಾರ್ಥ.

೩. ಮೊದಲನೇ ವರ್ಗದ ಪ್ರತ್ಯಯಗಳೇ ೨ನೇ ವರ್ಗದ ಪ್ರತ್ಯಯಗಳು; ಆದರೆ ವರ್ತಮಾನ ಅನದ್ಯತನಭೂತಕಾಲಗಳಲ್ಲಿ ಆದಂತೆ, ಆಜ್ಞಾರ್ಥದಲ್ಲಿಯೂ ಆತ್ಮನೇಪದಪ್ರತ್ಯಯದೊಳಗಿನ इ ಕಾರಕ್ಕೆ ಬದಲಾಗಿ आ ಕಾರ ಬರುವದು; ಮತ್ತು ಪ್ರಥಮಪುರುಷ ಬಹುವಚನ ಪ್ರತ್ಯಯದೊಳಗಿನ न् ಕ್ಕೆ ಲೋಪ ಬರುವದು.

ಆ ಪ್ರತ್ಯಯಗಳು ಯಾವವೆಂದರೆ—

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | ताम् | आताम् | अताम् |
| ಮ. ಪು. | स्व | आथाम् | ध्वम् |
| ಉ. ಪು. | ऐ | आवहै | आमहै |

चि (ಆ.)

| | | | |
|---|---|---|---|
| ಪ್ರ. ಪು. | चिनुताम् | चिन्वाताम् | चिन्वताम् |
| ಮ. ಪು. | चिनुष्व | चिन्वाथाम् | चिनुध्वम् |
| ಉ. ಪು. | चिनवै | चिनवावहै | चिनवामहै |

अश् (೫ನೇ ಗಣ ಆ.).

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | अश्नुताम् | अश्नुवाताम् | अश्नुवताम् |
| ಮ. ಪು. | अश्नुष्व | अश्नुवाथाम् | अश्नुध्वम् |
| ಉ. ಪು. | अश्नवै | अश्नवावहै | अश्नवामहै |

ಆತ್ಮನೇಪದ ಆಜ್ಞಾರ್ಥದ ಉತ್ತಮಪುರುಷಪ್ರತ್ಯಯಗಳಷ್ಟೇ ಸಬಲವಾಗಿರುವದರಿಂದ ಆ ರೂಪಗಳಲ್ಲಿ ಮಾತ್ರ नुಕ್ಕೆ नो, ಬಳಿಕ नव् ಆಯಿತು.

ವಿಧ್ಯರ್ಥ.

೪. ಮೊದಲನೇ ವರ್ಗದ ಆತ್ಮನೇಪದ ವಿಧ್ಯರ್ಥದ ಪ್ರತ್ಯಯಗಳೇ ಈ ೨ನೇ ವರ್ಗದ (ಆತ್ಮನೇಪದ) ಪ್ರತ್ಯಯಗಳು.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | चिन्वीत | चिन्वीयाताम् | चिन्वीरन् |
| ಮ. ಪು. | चिन्वीथाः | चिन्वीयाथाम् | चिन्वीध्वम् |
| ಉ. ಪು. | चिन्वीय | चिन्वीवहि | चिन्वीमहि |
| ಪ್ರ. ಪು. | अश्नुवीत | अश्नुवीयाताम् | अश्नुवीरन् |
| ಮ. ಪು. | अश्नुवीथाः | अश्नुवीयाथाम् | अश्नुवीध्वम् |
| ಉ. ಪು. | अश्नुवीय | अश्नुवीवहि | अश्नवीमहि |

ಪುಟ ೧೫ (ಬ) ನಿಯಮವನ್ನು ನೋಡು. ಅದರಲ್ಲಿ वकारಾಗಮವನ್ನು ಕುರಿತು ಹೇಳಿರುತ್ತದೆ.

೫. ೮ನೆಯ ಗಣದ ಧಾತುಗಳ ಆಖ್ಯಾತರೂಪಗಳು चि ಧಾತುವಿನ ರೂಪಗಳಂತೆಯೇ; ಇದರಲ್ಲಿ नुಕ್ಕೆ ಬದಲಾಗಿ उ ವಿಕರಣವು ಬರುತ್ತದೆಂಬದನ್ನು ಮಾತ್ರ ಲಕ್ಷ್ಯದಲ್ಲಿಡಬೇಕು.

यಕಾರಾದಿ ವಿಧ್ಯರ್ಥದ ಆಖ್ಯಾತಪ್ರತ್ಯಯಗಳು ಪರವಾಗಲು कृ ಧಾತುವಿನ उ ವಿಕರಣಕ್ಕೆ ಲೋಪ ಬರುವದು.

ಆಜ್ಞಾರ್ಥ.

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | तनुताम् | तन्वाताम् | तन्वताम् |
| ಮ. ಪು. | तनुष्व | तन्वाथाम् | तनुध्वम् |
| ಉ. ಪು. | तनवै | तनवावहै | तनवामहै |

ಪರಸ್ಮೈಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | तनोतु | तनुताम् | तन्वन्तु |
| ಮ. ಪು. | तनु | तनुतम् | तनुत |
| ಉ. ಪು. | तनवानि | तनवाव | तनवाम |

ವಿಧ್ಯರ್ಥ (ಪ.).

| | | | |
|---|---|---|---|
| ಪ್ರ. ಪು. | कुर्यात् | कुर्याताम् | कुर्युः |
| ಮ. ಪು. | कुर्याः | कुर्यातम् | कुर्यात |
| ಉ. ಪು. | कुर्याम् | कुर्याव | कुर्याम |

तन्वीय ವಿಧ್ಯರ್ಥ ಆ. ಉ. ಏ.
तनुयाम् " ಪ. " "
कुर्वीय " ಆ. " "

ಆಜ್ಞಾರ್ಥ (ಪ.).

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | करोतु | कुरुताम् | कुर्वन्तु |
| ಮ. ಪು. | कुरु | कुरुतम् | कुरुत |
| ಉ. ಪು. | करवाणि | करवाव | करवाम |

ಆತ್ಮನೇಪದ.

| | | | |
|---|---|---|---|
| ಪ್ರ. ಪು. | कुरुताम् | कुर्वाताम् | कुर्वताम् |
| ಮ. ಪು. | कुरुष्व | कुर्वाथाम् | कुरुध्वम् |
| ಉ. ಪು. | करवै | करवावहै | करवामहै |

ಪುಟ ೧೬ರಲ್ಲಿ ೯ನೆಯ ನಿಯಮವನ್ನು ನೋಡು. ಅದರಲ್ಲಿ कृ ಧಾತುವಿನ कर् ಮತ್ತು कुर् ರೂಪಗಳನ್ನು ಕುರಿತು ಹೇಳಿರುತ್ತದೆ.

खादिरं यूपं कुर्वीत स्वर्गकामः खादिरेणैव वै यूपेन देवाः स्वर्गं लोकमजयंस्तथैवैतद्यजमानः खादिरेण यूपेन स्वर्गं लोकं जयति ।

दुःखसन्तापेन पच्यन्त[1] इव मेऽङ्गान्युत्क्वथ्यत इव हृदयं प्लुष्यत इव दृष्टिर्ज्वलतीव शरीरम् । अत्र यत्प्राप्तकालं तत्करोतु भवान् ।

---

1) ಪದಾಂತ್ಯ ए, ऐ, ओ, औ ಕಾರಗಳಿಗೆ ಸ್ವರ ಪರವಾಗಲು ಕ್ರಮವಾಗಿ अय्, आय्, अव्, आव् ಆದೇಶವಾಗುತ್ತವೆ; ಅವುಗಳ य्, व् ಗಳಿಗೆ ವಿಕಲ್ಪದಿಂದ ಲೋಪ ಬರುವದು.

वत्स प्रसन्नोऽस्मि ते कथय किं ते प्रियं करवाणि ।

हे ऋत्विजोऽद्य सुत्यादिने सोमं सुनुध्वम् ।

कथं नाम प्रभोरादेशमुल्लङ्घयितुं शक्नुयाम् ।

एतैरालापैरात्मनः कार्पण्यं मापावृणुष्व ।

राजन्यनुरागमाविष्कुर्वतां जना यतस्तेषां संकटानि नश्येयुः ।

आत्मनः पुत्राणां प्रवृत्त्युपलब्धये दासं श्रीनगरं प्रहिणु ।

राजन्प्रीताः स्मः शुश्रूषया तवैतया तस्मात्सर्वैर्गुणैरुपेतं पुत्रमवाप्नुहि ।

शृणुत रे पौराः । अयं वसन्तसेनाघातकश्चारुदत्तो वधस्तम्भं नीयते तद्यदीदृशं कर्म केऽपि कुर्वीरन्दण्डमप्येतादृशं प्राप्नुयुः ।

मृतं शरीरमुत्सृज्य काष्ठलोष्ठसमं क्षितौ ।
विमुखा बान्धवा यान्ति[1] धर्मस्तमनुगच्छति ॥
तस्माद्धर्मं सहायार्थं नित्यं संचिनुयाच्छनैः[2] ।
धर्मेण हि सहायेन तमस्तरति दुस्तरम् ॥
पूर्वे वयसि तत्कुर्याद्येन वृद्धः सुखं वसेत् ।
यावज्जीवेन तत्कुर्याद्येनामुत्र सुखं वसेत् ॥
श्वःकार्यमद्य कुर्वीत पूर्वाह्णे चापराह्णिकम् ।
न हि प्रतीक्षते मृत्युः कृतमस्य न वा कृतम् ॥

ಸೇವಕನು ನೆಲದ ಮೇಲೆ ಜಮಖಾನೆಗಳನ್ನು ಹಾಸಲಿ (स्तृ).

ಬ್ರಾಹ್ಮಣರು ನಾಲ್ಕೂ ಕಡೆಗೆ ಹೋಗಿ ನಳರಾಜನನ್ನು ಹುಡುಕಲಿ (वि+चि).

ಅವನು ಹೇಳಿದರೆ ನಾನು ಅದನ್ನು ಮಾಡುವೆನು (कृ)

ಶತ್ರುಗಳನ್ನು ತಿರಸ್ಕರಿಸಬೇಡ (तिरस्+कृ); ಯಾಕಂದರೆ ಅವರು ಬಲಿಷ್ಠರಿರುತ್ತಾರೆ.

ಬಲಹೀನರು ವಿವೇಕಿಗಳಾದರೆ, ಬಲಿಷ್ಠರನ್ನು ಯುದ್ಧಕ್ಕೆ ಕರೆಯಬಾರದು (धृष्).

---

1) **या** (ಹೋಗು) ಧಾತು ೨ನೇ ಗ. ಪ. ಇದರ ವರ್ತಮಾನ ಪ್ರಥಮಪುರುಷ ಬಹುವಚನ.

2) ಶಬ್ದಾಂತದಲ್ಲಿ ಅಥವಾ ಪದಾಂತದಲ್ಲಿರುವ ಅನುನಾಸಿಕವನ್ನು ಬಿಟ್ಟು ಉಳಿದ ಯಾವದೊಂದು ವರ್ಗಾಕ್ಷರದ ಮುಂದೆ ಸ್ವರವಾಗಲಿ, ಅರ್ಧಸ್ವರವಾಗಲಿ, ಅನುನಾಸಿಕವಾಗಲಿ ಪರವಾದ **श्**ಕಾರ ಬಂದರೆ, ಆ **श्**ಕ್ಕೆ ವಿಕಲ್ಪದಿಂದ **छ्** ಆದೇಶವಾಗುವದು.

ಸೋಮಯಾಗದಲ್ಲಿ ಋತ್ವಿಜರು ಸೋಮಬಳ್ಳಿಯ ರಸವನ್ನು ತೆಗೆಯ ತಕ್ಕದ್ದು (सु).

ಅವನು ಏನನ್ನುತ್ತಾನೆ ಕೇಳು! (श्रु) "ನೀನು ಮೂರ್ಖನಿರುತ್ತೀ" ಎಂದೆನ್ನುತ್ತಾನೆ.

ನೀವು ನಿಮ್ಮ ಮಕ್ಕಳನ್ನು ವಿದ್ಯಾಭ್ಯಾಸದ ಸಲುವಾಗಿ ಇಂಗ್ಲಂಡಕ್ಕೆ ಕಳುಹಿಸುವಿರೆಂದು (प्र+हि) ನಾನು ಕೋರುತ್ತೇನೆ.

ನಮ್ಮಲ್ಲಿ ಅವನ ದಯವಿರುವ ಮಟ್ಟಿಗೆ ನಾವು ನಮ್ಮ ಕೋರಿಕೆಗಳನ್ನು ಸಾಧಿಸಿಕೊಳ್ಳುವ.

ಆ ಬಡ ಹಕ್ಕಿಗಳನ್ನು ಕಾಡ (त्रु) ಬೇಡ.

---

## ಕೋಶ ೪.

**अनुराग** (ಪು.) ಪ್ರೀತಿ, ಸ್ನೇಹ.

**अमुत्र** (ಅ.) ಸ್ವರ್ಗದಲ್ಲಿ.

**आपराह्णिक** (ವಿ.) ಮಧ್ಯಾಹ್ನ ಮೀರಿದ ಮೇಲೆ ಮಾಡುವ ಕೆಲಸ.

**आलाप** (ಪು.) ಭಾಷಣ, ಹರಟೆ.

**प्रति+ईक्ष्** (೧ನೇ ಗ. ಆ.) ನೋಡು, ಹಾದಿ ನೋಡು, ಚಿಂತಿಸು.

**उपेत** (उप+इ ಧಾತುವಿನ ಕ. ಭೂ. ವಿ.) ಉಳ್ಳ, ಹೊಂದಿದ.

**ऋत्विज्** (ಪು.) ಯಾಜಕ.

**एतादृश** (ವಿ.) ಈ ವಿಧದ.

**कथं नाम** (ಅ.) ಹ್ಯಾಗೋ?

**कार्पण्य** (ನ.) ಕೀಳುತನ, ನೀಚತನ.

**काष्ठलोष्ठसम** (ವಿ.) [**काष्ठ** (ನ.) ಕಟ್ಟಿಗೆ, **लोष्ठ** (ಪು. ನ.) ಹೆಂಟೆ] ಕಟ್ಟಿಗೆ ಹೆಂಟೆಗಳ ಸರಿ.

**उद्+कथ्** (೧ನೇ ಗ. ಪ.) ಕುದಿ.

**क्षिति** (ಸ್ತ್ರೀ.) ಭೂಮಿ, ಪೃಥ್ವಿ, ನೆಲ.

**खादिर** (ವಿ.) ಖದಿರದ ಮರದ.

**चारुदत्त** (ಪು.) ಒಬ್ಬ ಮನುಷ್ಯನ ಹೆಸರು.

**ज्वल्** (೧ನೇ ಗ. ಪ.) ಸುಡು, ಉರಿಯು.

**दुस्तर** (ವಿ.) ನೀಗದಂಥ, ಅಲಂಘ್ಯ.

**दुःखसंताप** (ಪು.) **दुःख** (ನ.) ನೋವು, ಬಳಲಿಕೆ; **संताप** (ಪು.) ಕಾವು] ಬಳಲಿಕೆಯ ಕಾವು, ಪೇಚಾಟ, ಉಮ್ಮಳ.

**पूर्वाह्ण** (ಪು.) ದಿವಸದ ಪೂರ್ವ ಭಾಗ, ಮುಂಜಾವು.

**प्रसन्न** (ವಿ.) [**प्र+सद्** ಇದರ ಕರ್ಮಾರ್ಥಕ ಭೂತ ಕೃದಂತ] ಒಲಿದ.

**प्रवृत्त्युपलब्धि** (ಸ್ತ್ರೀ.) [**प्रवृत्ति** (ಸ್ತ್ರೀ.) ಸುದ್ದಿ **उपलब्धि** (ಸ್ತ್ರೀ.) ದೊರಕಿಸುವಿಕೆ] ಸುದ್ದಿ ದೊರಕಿಸುವಿಕೆ.

**प्राप्तकाल** (ವಿ.) [**प्राप्त, प्र+आप्** (ಧಾ. ಕರ್ಮಾರ್ಥಕ ಭೂತ ಕೃ.) ಬಂದ, ಬದಗಿದ; **काल** (ಪು.) ಹೊತ್ತು] ಹೊತ್ತಿಗೆ ಸರಿಯಾದ ಕಾಲಕ್ಕೆ ಸರಿಯಾದ, ಕಾಲವೊದಗಿದ.

**प्रीत** (ವಿ.) [**प्री** ಧಾತುವಿನ ಕರ್ಮಾರ್ಥಕ ಭೂ. ಕೃ.] ಒಲಿದ, ಸಂತುಷ್ಟವಾದ.

**प्लुष्** (೧ನೇ ಗ. ಪ.) ಸುಡು.

**यजमान** (ಪು.) ಯಜ್ಞ ಮಾಡುವವ.

**यावज्जीवेन** (ಅ.) ಜೀವದಿಂದ ಇರುವ ಮಟ್ಟಿಗೆ.

**यूप** (ಪು.) ಕಂಬ (ಯಜ್ಞದ ಪಶುವನ್ನು ಕಟ್ಟುವ ಕಂಬ).

**लङ्घ्** (೧ನೇ ಗ. ೧೦ನೇ ಗ. ಉಭ.) ದಾಟು. [**उद्+लङ्घ्** ಮೀರು, ಅತಿಕ್ರಮಿಸು].

**वधस्तम्भ** (ಪು.) ಕೊಲ್ಲುವ ಕಂಬ.

**वसन्तसेनाघातक** (ಪು.) [**वसन्तसेना** ಒಬ್ಬ ಸ್ತ್ರೀಯ ಹೆಸರು, **घातक** ಕೊಲೆಗಡುಕ, ಸಂಹಾರಕ] ವಸಂತಸೇನೆಯನ್ನು ಕೊಲ್ಲುವವ.

**विमुख** (ವಿ.) ಮೋರೆಯನ್ನು ತಿರುವಿದ, ಹಿಂದಿರುಗಿದ.
**शनैः** (ಅ.) ಮೆಲ್ಲಮೆಲ್ಲನೆ, ಕ್ರಮೇಣ.
**शुश्रूषा** (ಸ್ತ್ರೀ.) ಸೇವೆ.
**श्वः** (ಅ.) ನಾಳೆ.
**श्वःकार्य** (ನ.) ನಾಳೆ ಮಾಡತಕ್ಕ ಕೆಲಸ.
**सहाय** (ಪು.) ನೆರವಾಗುವವ, ಜತೆಗಾರ.
**सुत्याविन** (ನ.) ಸೋಮಯಾಗದಲ್ಲಿ ಸೋಮರಸವನ್ನು ಕುಡಿಯುವ ದಿವಸದ ಹೆಸರು.
**स्तृ** (೫ನೇ ಗ. ಪ. ಉ.) ಮುಚ್ಚು [**सम्** + **स्तृ** ಹಾಸು].
**स्वर्गकाम** (ವಿ.) ಸ್ವರ್ಗವನ್ನು ಕೋರುವ.

---

ಆಜ್ಞಾಪಿಸು **आ** + **दिश्** (೬ನೇ ಗ. ಪ.).
ಜಮಖಾನೆ **कुथ** (ಪು.).
ಶಿಕ್ಷಣ **अध्ययन** (ನ.) **विनयन** (ನ.).
ನೆಲ **भूमि** (ಸ್ತ್ರೀ.).
ಬಡ **अनपकारिन्** (ವಿ.), **साधु** (ವಿ.).
ಕಡೆಗೆ, ಎಡೆಗೆ **प्रति** (ಈ ಶಬ್ದವು ದ್ವಿತೀಯಾ ವಿಭಕ್ತಿಯ ಮೇಲೆ ಬರುವದು. ಉದಾ: ನಿನ್ನ ಕಡೆಗೆ **त्वाम् प्रति**).
ಒಲಿದ, ದಯವುಳ್ಳ **प्रीत, स्निग्ध, सस्नेह** (ವಿ.).
ರಸ **रस** (ಪು.).

---

# ೫ನೇ ಪಾಠ.

## ೯ನೇ ಗಣ.

### ವರ್ತಮಾನಕಾಲ ಹಾಗು ಆಜ್ಞಾರ್ಥ.

೧. ಈ ಗಣದ ವಿಕರಣವು **ना**. ವ್ಯಂಜನಾದಿ ದುರ್ಬಲಪ್ರತ್ಯಯಗಳ ಪೂರ್ವದಲ್ಲಿ ಇದಕ್ಕೆ **नी** ಆದೇಶವೂ, ಸ್ವರಾದಿ ದುರ್ಬಲಪ್ರತ್ಯಯಗಳ ಪೂರ್ವದಲ್ಲಿ **न्** ಆದೇಶವೂ ಆಗುತ್ತವೆ.

೨ನೇ ವರ್ಗದ ಧಾತುಗಳ ಸಾರ್ವಧಾತುಕ ಆಖ್ಯಾತಪ್ರತ್ಯಯಗಳನ್ನು ಹಿಂದಿನ ಮೂರು ಪಾಠಗಳಲ್ಲಿ ಹೇಳಿರುತ್ತೇವೆ.

**क्री** (ಉಭ.) ಕೊಳ್ಳು.

ಪರಸ್ಮೈಪದ.

ವರ್ತಮಾನಕಾಲ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | **क्रीणाति** | **क्रीणीतः** | **क्रीणन्ति** |
| ಮ. ಪು. | **क्रीणासि** | **क्रीणीथः** | **क्रीणीथ** |
| ಉ. ಪು. | **क्रीणामि** | **क्रीणीवः** | **क्रीणीमः** |

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | क्रीणीते | क्रीणाते | क्रीणते |
| ಮ. ಪು. | क्रीणीषे | क्रीणाथे | क्रीणीध्वे |
| ಉ. ಪು. | क्रीणे | क्रीणीवहे | क्रीणीमहे |

ಪರಸ್ಮೈಪದ.

ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | क्रीणातु | क्रीणीताम् | क्रीणन्तु |
| ಮ. ಪು. | क्रीणीहि | क्रीणीतम् | क्रीणीत |
| ಉ. ಪು. | क्रीणानि | क्रीणाव | क्रीणाम |

ಆತ್ಮನೇಪದ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | क्रीणीताम् | क्रीणाताम् | क्रीणताम् |
| ಮ. ಪು. | क्रीणीष्व | क्रीणाथाम् | क्रीणीध्वम् |
| ಉ. ಪು. | क्रीणै | क्रीणावहै | क्रीणामहै |

ಸಬಲ ದುರ್ಬಲಪ್ರತ್ಯಯಗಳು ಪರವಾಗಲು **ना** ಎಂಬದಕ್ಕೆ ಆಗುವ ರೂಪಾಂತರಗಳನ್ನು ಲಕ್ಷ್ಯದಲ್ಲಿಡತಕ್ಕದ್ದು.

೨. ವ್ಯಂಜನಾಂತ ಪರಸ್ಮೈಪದಧಾತುಗಳ ಆಜ್ಞಾರ್ಥ ಮಧ್ಯಮಪುರುಷೈಕವಚನದ ರೂಪವು ಧಾತುಗಳ ಮೇಲೆ ಕೇವಲ **आन** ಪ್ರತ್ಯಯವನ್ನು ಸೇರಿಸಲು ಸಿದ್ಧವಾಗುತ್ತದೆ. ಉದಾ: मुष ಕದಿಯು, मुषाण (ನೀನು) ಕದಿ.

मुष् (ಪರ.) ಆಜ್ಞಾರ್ಥ.

| | ಏ. | ದ್ವಿ. | ಬಹು. |
|---|---|---|---|
| ಪ್ರ. ಪು. | मुष्णातु | मुष्णीताम् | मुष्णन्तु |
| ಮ. ಪು. | मुषाण | मुष्णीतम् | मुष्णीत |
| ಉ. ಪು. | मुष्णानि | मुष्णाव | मुष्णाम |

**आप्** (೫ನೇ ಗ. ಪ.) ಪಡಿ, ಹೊಂದು, ಸಂಪಾದಿಸು; (**अव** ಪೂರ್ವಕ) ಗಳಿಸು, ಹೊಂದು.

**आपराह्णिक** (ಪು.) ಮಧ್ಯಾಹ್ನದ ತರುವಾಯದ, ಇಳಿಹೊತ್ತಿನ ಕಡೆಯ.

**आपाण्डुर** (ವಿ.) ಸ್ವಲ್ಪ ವಿವರ್ಣವಾದ, ನಸುಬಾಡಿದ.

**आप्त** (ಪು.) ಗೆಳೆಯ, ನೆಂಟ, ಹಿತಚಿಂತಕ.

**आप्रीत** (ವಿ.) **आप्री** ಎಂಬ ಮಂತ್ರಗಳಿಂದ ಪವಿತ್ರತ್ವವನ್ನು ಹೊಂದಿದ.

**आमिष** (ಪು. ನ.) ಮಾಂಸ.

**आमोद** (ಪು.) ಸುಗಂಧ, ಪರಿಮಳ.

**आयत्त** (ವಿ.) ವಶದಲ್ಲಿರುವ, ಅಧೀನವಾಗಿರುವ.

**आयास्य** (ಪು.) ಒಬ್ಬ ಋಷಿಯ ಹೆಸರು.

**आयुष्काम** (ಪು.) ಬಹಳ ದಿವಸ ಬದುಕಲಪೇಕ್ಷಿಸುವ, ದೀರ್ಘಾಯುಷ್ಯವನ್ನು ಬಯಸುವ.

**आयुस्** (ನ.) ಆಯುಷ್ಯ, ಜೀವ.

**आराधना** (ಸ್ತ್ರೀ.) ಪೂಜೆ.

**आराधित** (ವಿ.) ಪೂಜಿಸಲ್ಪಟ್ಟ, ಸಂತೋಷಿಸಲ್ಪಟ್ಟ.

**आरूढ** (ವಿ.) ಏರಲ್ಪಟ್ಟ, ಹತ್ತಿಕೂತ.

**आर्त** (ವಿ.) ದುಃಖಿತ, ದಣಿದ.

**आर्द्र** (ವಿ.) ಹಸಿದ, ತೊಯ್ದ.

**आर्द्रा** (ಸ್ತ್ರೀ.) ಒಂದು ನಕ್ಷತ್ರ.

**आलवाल** (ನ.) ಗಿಡಬಳ್ಳಿಗಳ ಬುಡದಲ್ಲಿ ನೀರಿಗಾಗಿ ಮಾಡಿದ ಪಾತಿ ಅಥವಾ ಕಟ್ಟೆ.

**आलाप** (ಪು.) ಸಂಭಾಷಣೆ.

**आली** (ಸ್ತ್ರೀ.) ಪಂಕ್ತಿ, ಸಾಲು.

**आविक्षित** (ಪು.) ಅವಿಕ್ಷಿತನ ಮಗ.

**आवृत** (ವಿ.) ಮುಚ್ಚಿದ, ತುಂಬಿದ, ಹೊದಿಸಿದ.

**आशा** (ಸ್ತ್ರೀ.) ಕೋರಿಕೆ.

**आशिस्** (ಸ್ತ್ರೀ.) ವರ, ಆಶೀರ್ವಾದ.

**आशीविष** (ಪು.) ಹಾವು.

**आस्** (೨ನೇ ಗ. ಆ.) ಕೂಡ್ರು; **अधि+आस्** ಕೂಡ್ರು; **उप+आस्** ಪೂಜಿಸು, ಸತ್ಕರಿಸು; **सत्र+आस्** ಒಂದರ ಹಿಂದೊಂದು ಏನಿಕೆ ಯಜ್ಞಗಳನ್ನು ಮಾಡು, ಯಜ್ಞಸಭೆಯನ್ನು ಕೂಡಿಸು.

**आसन्** (ನ.) ಬಾಯಿ, ಮುಖ.

**आसन्नमरण** (ವಿ.) **आसन्न** (ವಿ.) ಸಮೀಪಿಸಿದ, ಸಮೀಪಕ್ಕೆ ಬಂದ; **मरण** (ನ.) ಸಾವು] ಸಾಯಲಿಕ್ಕಾದ, ಮರಣೋನ್ಮುಖನಾದ.

**आसाद्य** (ವಿ.) ಸಿಗುವಂಥ, ದೊರಕುವಂಥ.

**आसीन** (ವಿ.) (**आस** ಧಾ. ವ. ಕೃ.) ಕೂಡ್ರುವ.

**आस्थान** (ನ.) ಸಭೆ ಕೂಡುವ ಸ್ಥಲ, ದರಬಾರದ ಸದರು.

**आस्य** (ನ.) ಮುಖ, ಬಾಯಿ.

**आस्वाद** (ಪು.) ರುಚಿ.

**आहव** (ಪು.) ಯುದ್ಧ, ಕಾಳಗ.

**आहुति** (ಸ್ತ್ರೀ.) ಬಲಿ.

## इ.

**इ** (೨ನೇ ಗ. ಪ.) ಹೋಗು; **अभि+इ** ಕಡೆಗೆ ಹೋಗು; **अव+इ** ಅರಿ, ತಿಳಿ; **आ+इ** ಬಾ, ಬರು; **उद्+इ** ಏಳು, ಹೆಸರಿಗೆ ಬರು; **निर्+इ** ಹೊರಡು, ಹೊರವಡು; **परि+इ** ಸುತ್ತ ತಿರುಗು, ಪ್ರದಕ್ಷಿಣ ಮಾಡು, ರೂಪಾಂತರವನ್ನು ಹೊಂದು; **व्यति+इ** ಕಳಿ, ಕಳೆದುಹೋಗು; **वि+अप+इ** ಬೇರೆ ಮಾಡು; **शरणम्+उप+इ** ಮೊರೆಇಡು, ಮರೆ ಹೊಗು; **सम्+इ** ಕೂಡು, ಒಂದಾಗು.

**इ** (೧ನೇ ಗ. ಪ. **उद्** ಪೂರ್ವಕ) ಏಳು, ಏರು.

**इ** (**अधि** ಪೂರ್ವಕ ೨ನೇ ಗ. ಆ.) ಕಲಿ, ಅಭ್ಯಾಸ ಮಾಡು, ಅಧ್ಯಯನ ಮಾಡು.

**इक्ष्वाकु** (ಪು.) ಸೂರ್ಯವಂಶದ ಅರಸುಗಳ ಪೂರ್ವಜನು.

**इच्छु** (ಪು.) ಬಯಸುವವ, ಇಚ್ಛಿಸುವವ.

**इतस्ततः** (ಅ.) ಅತ್ತಿತ್ತ.

**इतिकर्तव्यता** (ಸ್ತ್ರೀ.) ಕೆಲಸವಮಾಡುವ ಸಿಸ್ತು ಅಥವಾ ಪದ್ಧತಿ.

**इन्द्रादि** (**इन्द्र** ಮತ್ತು **आदि** ಮೊದಲಾದ) ಇಂದ್ರ ಮೊದಲಾದ ದೇವತೆಗಳು.

**इन्द्रिय** (ನ.) ತ್ರಾಣ, ಬಲ (ಅವಯವಗಳ).

**इन्द्रियसौष्ठव** (ನ.) [**इन्द्रिय** (ನ.) ಅವಯವ, **सौष्ठव** (ನ.) ಸೌಂದರ್ಯ, ಚಲುವಿಕೆ] ಆಕಾರದ ಚಲುವಿಕೆ, ಸುಂದರವಾದ ಮೈಕಟ್ಟು.

**इन्द्रियार्थोपसेवन** (ನ.) [**अर्थ** (ಪು.) ವಿಷಯ, **उपसेवन** (ನ.) ಉಪಭೋಗ] ವಿಷಯಸುಖವನ್ನು ಭೋಗಿಸೋಣ, ವಿಷಯೋಪಭೋಗ.

**इन्दुमती** (ಸ್ತ್ರೀ.) ಒಬ್ಬ ಸ್ತ್ರೀಯ ಹೆಸರು.

**इन्ध्** (೭ನೇ ಗ. ಆ.) ಹೊತ್ತಿಸು.

**इष्टद** (ವಿ.) ಬೇಡಿದ್ದನ್ನು ಕೊಡುವ, ಕೋರಿದ್ದನ್ನು ಕೊಡುವ.

**इष्टदेवता** (ಸ್ತ್ರೀ.) ಮನಃಪೂರ್ವಕವಾಗಿ ಪೂಜಿಸಲ್ಪಡುವ ದೇವತೆಯು.

## ई.

**ई** (೪ನೇ ಗ. ಆ. **उद्** ಪೂರ್ವಕ) ಏಳು, ಏರು, ಮೇಲಕ್ಕೆ ಬರು.

**ईक्ष्** (**प्रति** ಪೂರ್ವಕ) ನೋಡು, ಎದುರುನೋಡು.

**ईड्** (೨ನೇ ಗ. ಆ., ೧೦ನೇ ಗ.) ಹೊಗಳು, ಸ್ತುತಿಸು.

**ईदृश** (ವಿ.) ಹೀಗೆ, ಇದರಂತೆ.

**ईर्** (೧ನೇ ಗ. ಪ. ೧೦ನೇ ಗ. **उद्** ಪೂರ್ವಕ) ಮಾತಾಡು, ಅನ್ನು.

**ईश्** (೨ನೇ ಗ. ಆ.) ಒಡೆಯನಾಗು, ಆಳು.

**ईश्वर** (ಪು.) ಆಳುವವ, ಒಡೆಯ.

**ईह्** (೧ನೇ ಗ. ಆ.) ಯತ್ನಮಾಡು, ಸಾಧಿಸು.

## उ.

**उ** ಅವ್ಯಯ.

**उख्** (೧ನೇ ಗ. ಪ.) ಹೋಗು.

**उग्र** (ವಿ.) ತೀಕ್ಷ್ಣ, ತೀವ್ರ.

**उग्रम्** (ಅ.) ಗಟ್ಟಿಯಾಗಿ, ಬಲವಾಗಿ.

**उच्चैः** (ಅ.) ಗಟ್ಟಿಯಾಗಿ, ದೊಡ್ಡ ಧ್ವನಿಯಿಂದ.

**उज्झ्** (೬ನೇ ಗ. ಪ.) ಚಲ್ಲು, ಒಗಿ.

**उडुप** (ಪು. ನ.) ನಾವೆ, ಡೋಣಿ.

**उत्तम** (ವಿ.) ಕಡೆಯ.

**उत्तमफलक** (ವಿ.) [**उत्तम** (ವಿ.) ಚಲೋ, ಶ್ರೇಷ್ಠವಾದ; **फल** (ನ.) ಕಾಯಿ, ಪರಿಣಾಮ] ಒಳ್ಳೇ ಪರಿಣಾಮದ, ಒಳ್ಳೇ ಫಲ ಕೊಡುವ.

**उत्तर** (ವಿ.) ಮೇಲಿನ, ಹಿಂದಿನ; (ನ.) ಮೇಲಿನ, ಹಿಂದಿನ.

**उत्तरकुरवः** (ಪು. ಬಹುವಚನ) ಹಿಮಾಲಯದ ಉತ್ತರದ ಪ್ರದೇಶ, (ಆರ್ಯರ ಮೂಲಸ್ಥಾನ).

**उत्तरा** (ಸ್ತ್ರೀ.) ವಿರಾಟರಾಯನ ಮಗಳು.

**उत्तरीय** (ನ.) ಮೇಲಿನ ವಸ್ತ್ರ, ಅಂಗವಸ್ತ್ರ.

**उत्तान** (ವಿ.) ಅಂಗಾತ.

**उत्पथास्थित** (ವಿ.) [**उत्पथ** (ಪು.) ಕೆಟ್ಟ ದಾರಿ, ಅಡ್ಡಹಾದಿ; **आस्थित** ಹಿಡಿದವ] ಕೆಟ್ಟ ಹಾದಿಯಿಂದ ಹೋಗುವವ.

**उत्पन्न** (ವಿ.) ಹುಟ್ಟಿದ.

**उत्पल** (ನ.) ಕಮಲ.

**उत्सङ्ग** (ಪು.) ಉಡಿ, ತೊಡೆ.

**उत्सृष्ट** (**उद्** + **सृज्** ಧಾತು ಭೂ. ಕೃ.) ಬಿಟ್ಟ, ತೆಗೆದುಹಾಕಿದ.

**उदञ्च्** (ವಿ.) ಉತ್ತರದ.

**उदन्** (ನ.) ನೀರು.

**उदर** (ನ.) ಹೊಟ್ಟೆ, ಒಂದು ತರದ ರೋಗ.

**उदरम्भरि** (ವಿ.) [**उदर** (ನ.) ಹೊಟ್ಟೆ, **भृ** ತುಂಬು] ಹೊಟ್ಟೆಬಾಕ, ಹೊಟ್ಟೆ ಹೊರಕೊಳ್ಳುವ.

**उदार** (ವಿ.) ದೊಡ್ಡ ಮನಸ್ಸಿನ.

**उदुम्बर** (ಪು.) ಅತ್ತೀಮರ, ಅತ್ತೀಹಣ್ಣು.

**उद्गम** (ಪು.) ಪುಟಿಯೋಣ, ಮೂಲ.

**उद्गातृ** (ಪು.) ಯಜ್ಞದಲ್ಲಿ ಸಾಮವೇದದ ಮಂತ್ರಗಳನ್ನು ಅನ್ನುವ ಬ್ರಾಹ್ಮಣನು.

**उद्दामवृत्ति** (ವಿ.) ಮನಸ್ಸಿಗೆ ಬಂದಂತೆ ನಡಿಯುವ, ಸ್ವೇಚ್ಛ, ಮಿತಿಮಾರಿದ, ಆಳತೆಗೆಟ್ಟ.

**उद्दालक** (ಪು.) ಒಬ್ಬ ಮನುಷ್ಯನ ಹೆಸರು

**उद्धत** (ವಿ.) ಗರ್ವಿಷ್ಠ, ಅಹಂಕಾರವುಳ್ಳ, ಉನ್ಮತ್ತ.

**उद्धतम्** (ಅ.) ಕಡವಿನಿಂದ ಉನ್ಮಾದದಿಂದ.

**उद्भूतविस्मय** (ವಿ.) ಚಕಿತನಾದ, ಆಶ್ಚರ್ಯಪಟ್ಟ.

**उद्यमभृत्** (ವಿ.) ಉದ್ಯೋಗಿ.

**उन्नति** (ಸ್ತ್ರೀ.) ದೊಡ್ಡಿಸ್ತನ, ಹೆಚ್ಚಳ, ಘನತೆ.

**उन्माद** (ಪು.) ಆನಂದ, ಸುಖ, ಅರಳುವಿಕೆ.

**उपकण्ठ** (ನ.) ಊರಮೇರೆ, ಊರಿಗೆ ಹೊಂದಿರುವ ಸ್ಥಲ.

**उपकार** (ಪು.) ಕಲ್ಯಾಣ, ಒಳ್ಳೇ ಕೆಲಸ, ಧರ್ಮದ ಕೆಲಸ.

**उपकारिन्** (ವಿ.) ಒಳಿತು ಮಾಡುವವ, ಕಲ್ಯಾಣ ಮಾಡುವವ.

**उपकृति** (ಸ್ತ್ರೀ.) ಉಪಕಾರ.

**उपचित** (ವಿ.) ಕೂಡಿಸಿದ, ಸಂಗ್ರಹಿಸಿದ.

**उपजनित** (**उप + जन्** ಧಾತು ಪ್ರೇರಣಾರ್ಥದ ಭೂ. ಕೃ.) ಹುಟ್ಟಿಸಿದ.

**उपनयन, उपनायन** (ನ.) ಮುಂಜಿ, ವ್ರತಬಂಧ.

**उपभोग** (ಪು.) ಅನುಭವಿಸೋಣ, ಸುಖಾನುಭವ.

**उपयुक्त** (ವಿ.) ಕೆಲಸಕ್ಕೆ ಹಚ್ಚಿದ, ಪ್ರಯೋಜನಕರವಾದ.

**उपरत** (ವಿ.) ಸತ್ತ, ಮುಗಿದ, ತೀರಿದ.

**उपरि** (ಅ.) ಮೇಲೆ.

**उपरितन** (ವಿ.) ಮೇಲಿನ.

**उपशम** (ಪು.) ಸಮಾಧಾನ.

**उपाकृत** (ವಿ.) ತಂದ.

**उपायन** (ನ.) ಕಾಣಿಕೆ.

**उपालभ्य** (ವಿ.) ಹಳಿಯತಕ್ಕ, ನಿಂದ್ಯ.

**उपेत** (**उप + इ** ಧಾತು ಭೂ. ಕೃ.) ಕೂಡಿದ, ಉಳ್ಳ.

**उभ** (ಸ.) ಇಬ್ಬರು, ಎರಡು.

**उभय** (ವಿ.) ಎರಡೂ ಕಡೆಯು; (ಸ.) ಎರಡೂ ಕಡೆಯು.

**उर्वी** (ಸ್ತ್ರೀ.) ಪೃಥ್ವಿ, ಭೂಮಿ, ನೆಲ.

**उलूपी** (ಸ್ತ್ರೀ.) ಅರ್ಜುನನ ಹೆಂಡತಿಯಾದ ಸರ್ಪಕನ್ನಿಕೆಯು ಹೆಸರು.

**उशनस्** (ಪು.) ರಾಕ್ಷಸರ ಗುರುವು, ಶುಕ್ರಾಚಾರ್ಯ.

**उष्** (೧ನೇ ಗ. ಪ.) ಸುಡು.

**उषस्** (ಸ್ತ್ರೀ.) ಅರುಣೋದಯು, ನಸುಕು.

**उष्णम्** (ಅ.) ಬಿಸಿಯಾಗಿ.

**उष्णरुचि** (ಪು.) ಸೂರ್ಯ.

**उष्मन्** (ಪು.) ಸೆಕೆ, ಉಷ್ಣತೆ.

### ऊ.

**ऊर्जित** (ವಿ.) ಉತ್ತಮವಾದ, ಉತ್ಕೃಷ್ಟವಾದ. ಸೊಕ್ಕಿದ, ಊಚ.

**ऊर्ध्व** (ವಿ.) ಮೇಲಿನ, ನೀಟಾದ.

### ऋ.

**ऋ** (೧ನೇ ಗ. ಪ.) ಹೋಗು.

**ऋजु** (ವಿ.) ಸರಳವಾದ, ಸಾಧು.

**ऋण** (ನ.) ಸಾಲ.

**ऋत्विज्** (ಪು.) ಯಜ್ಞದ ಬ್ರಾಹ್ಮಣ

**ऋभुक्षिन्** (ಪು.) ಇಂದ್ರನ ಹೆಸರು.

### ए.

**एकश** (ಅ.) ಒಮ್ಮೆ.

**एकमनस्** (ವಿ.) ಒಂದೇ ಮನಸ್ಸಿನ, ಒಕ್ಕಟ್ಟುಳ್ಳ.

**एकरात्र** (ನ.) ಒಂದು ರಾತ್ರಿ.

**एकाकिन्** (ವಿ.) ಒಬ್ಬನೇ, ಒಂಟಿಯಾದ.

**एकान्त** (ವಿ.) ಎಡೆಬಿಡದ, ತೆರಪಿಲ್ಲದ.

**एकान्तगुण** (ವಿ.) ಸಹಜ ಧರ್ಮ, ಎಂದೂ ಬೇರೆಯಾಗದಂಥ ಅಥವಾ ಬದಲಾಗದಂಥ ಗುಣ, ಶಾಶ್ವತವಾದ ಗುಣ.

**एकान्ततः** (ಅ.) ಒಂದೇ ಸಮನಾಗಿ, ತೆರಪಿಲ್ಲದೆ.

**एकैक** (ವಿ. ಸ.) ಒಂದರ ಹಿಂದೊಂದು, ಒಂದೊಂದು.

**एतादृश** (ವಿ.) ಈ ತರಪ, ಇದರಂಥ.

**एनस्** (ನ.) ಪಾಪ, ಪಾತಕ.

## ऐ

**ऐक्ष्वाक** (ಪು.) ಇಕ್ಷ್ವಾಕುವಿನ ವಂಶದವ.

**ऐन्द्र** (ವಿ.) ಇಂದ್ರನ, ಇಂದ್ರನ ಸಂಬಂಧವಾದ.

**ऐलूष** (ಪು.) ಇಲೂಷಾನ ಮಗನು.

## औ

**औषध** (ಪು.) ಮದ್ದು.

## क.

**कक्षा** (ಸ್ತ್ರೀ.) ಕೋಣೆ.

**कङ्कण** (ನ.) ಕಡಗ, ಬಳೆ.

**कच** (ಪು.) ಕೂದಲು.

**कट** (ವಿ.) ಚಾಪೆ.

**कण्व** (ಪು.) ಒಬ್ಬ ಋಷಿಯ ಹೆಸರು.

**कतिचित्** (ಸ.) ಎಷ್ಟೋ.

**कनक** (ನ.) ಬಂಗಾರ.

**कन्यका** (ಸ್ತ್ರೀ.) ಮಗಳು, ಹುಡುಗಿ.

**कपाल** (ಪು. ನ.) ತಲೆಬುರುಡೆ, ತಲೆ.

**कपिल** (ವಿ.) ತಾಮ್ರಬಣ್ಣದ.

**कम्** (೧೦ನೇ ಗ.) ಪ್ರೀತಿಸು, ಇಚ್ಛಿಸು, ಬಯಸು.

**करणीय** (ನ.) ಮಾಡತಕ್ಕ ಕೆಲಸ, ಕರ್ತವ್ಯ.

**करिन्** (ಪು.) ಆನೆ.

**करुण** (ಪು.) ವ್ಯಸನಕರವಾದ, ದುಃಖಕರವಾದ.

**करुणापर** (ವಿ.) ದಯವುಳ್ಳ, ಕನಿಕರವುಳ್ಳ.

**कर्कोटक** (ಪು.) ಒಂದು ಹಾವಿನ ಹೆಸರು.

**कर्ण** (ನ.) ಒಬ್ಬ ಮನುಷ್ಯನ ಹೆಸರು.

**कर्मपथ** (ಪು.)(**कर्मन्** ಕೆಲಸ, ಕಾರ್ಯ; **पथिन्** ಮಾರ್ಗ) ಕಾರ್ಯಮಾರ್ಗ, ಕೆಲವು ಯಜ್ಞಾದಿ ಕರ್ಮಗಳನ್ನು ಮಾಡಿ, ಸಾಯುಜ್ಯ ಸುಖವನ್ನು ಪಡೆಯುವ ಮಾರ್ಗ.

**कलत्र** (ನ.) ಹೆಂಡತಿ.

**कलह** (ಪು.) ಜಗಳ.

**कलहंसक** (ಪು.) ಒಂದು ಜಾತಿಯ ಹಂಸಪಕ್ಷಿ.

**कला** (ಸ್ತ್ರೀ.) ವಿದ್ಯೆ.

**कलाप** (ಪು.) ಗುಂಪು, ಸಮೂಹ.

**कलि** (ಪು.) ನಾಲ್ಕು ಯುಗಗಳಲ್ಲಿ ಕಡೆಯದು. ಬಹಳ ಪಾಪವುಳ್ಳದ್ದು, ದುಷ್ಟ ತತ್ವ.

**कलिङ्ग** (ಪು.) ಒಂದು ದೇಶದ ಹೆಸರು (ನಿತ್ಯ ಬಹುವಚನದಲ್ಲಿ).

**कल्पान्त** (ಪು.) [**कल्प** (ಪು.) ಒಂದು ಯುಗ, **अन्त** ಕೊನೆ] ಯುಗಾಂತ, ಜಗತ್ತು ಮುಳುಗುವ ಕಾಲ.

**कल्पित** (**क्लृप्** ಧಾತು ಪ್ರೇರ. ಭೂ. ಕೃ.) ಆಲೋಚಿಸಿದ, ಯೋಚಿಸಿದ.

**कवष** (ಪು.) ಒಬ್ಬ ಮನುಷ್ಯನ ಹೆಸರು.

**कविता** (ಸ್ತ್ರೀ.) ವಿದ್ಯ, ಪದ್ಯ.

**कष्ट** (ವಿ.) ಸಂಕಟದ ಇಕ್ಕಟ್ಟಾದ.

**कष्टं कष्टम्** (ಅ.) ಅಯ್ಯೋ, ದುಃಖದ.

**कस्** (**वि** ಪೂರ್ವಕ ೧ನೇ ಗ. ಪ.) ಅರಳು, ತೆರೆ.

**काकुत्स्थ** (ಪು.) ಕಕುತ್ಸ್ಥನ ವಂಶದವ, ರಾಮಚಂದ್ರ.

**कात्यायन** (ಪು.) ಒಬ್ಬ ದೊಡ್ಡ ವೈಯಾಕರಣಿಯು.

**कादम्बरी** (ಸ್ತ್ರೀ.) ಒಬ್ಬ ಸುಂದರಿಯ ಹೆಸರು.

**कानन** (ನ.) ಅಡವಿ, ಬನ, ತೋಪು.

**काम** (ಪು.) ಅಭಿಲಾಷೆ.

**कामदुह्** (ವಿ.) ಅಭೀಷ್ಟವನ್ನು ಸಲ್ಲಿಸುವ, ಕೋರಿಕೆಯನ್ನು ಪೂರೈಸುವ.

**कामप्रि** (ಪು.) ಮನೋರಥಗಳೆಲ್ಲ ಸಿದ್ಧಿಗೆ ಹೋದಂಥವ.

**काय** (ಪು.) ಶರೀರ, ದೇಹ.

**कारय** (**कृ** ಧಾತು ಪ್ರೇರಣಾರ್ಥಕ) ಮಾಡಿಸು.

**कार्तिक्येकादशी** (ಸ್ತ್ರೀ.) [**कार्तिकी** (ಸ್ತ್ರೀ.) ಕಾರ್ತಿಕದ] ಕಾರ್ತಿಕದ ಏಕಾದಶೀ.

**कार्पण्य** (ನ.) ಕೀಳತನ, ಕ್ಷುಲ್ಲಕತನ.

**कार्मुक** (ನ.) ಧನುಸ್ಸು, ಬಿಲ್ಲು: **अधिज्यकार्मुक** ಬಿಲ್ಲಿಗೆ ಹೆದೆ ಏರಿಸಿದವ.

**कार्य** (ವಿ.) ಮಾಡತಕ್ಕ; (ನ.) ಕೆಲಸ.

**कार्यकर** (ವಿ.) ಆಳು, ಕೆಲಸ ಮಾಡುವವ.

**कार्यद्वयाकुल** (ವಿ.) ಒಂದೇ ಹೊತ್ತಿಗೆ ಎರಡು ಕೆಲಸಗಳನ್ನು ಮಾಡಬೇಕಾದದರಿಂದ ಪೇಚಾಡುವವ.

**कालेय** (ಪು.) ಕೆಲವು ರಾಕ್ಷಸರ ಹೆಸರು.

**काव्य** (ನ.) ಕವಿತಾಗ್ರಂಥ.

**काश** (ಪು.) ಒಂದು ತರದ ಬಿಳಿ ಹೂವು.

**काष्ठलोष्टसम** (ವಿ.) [**काष्ठ** (ನ.) ಕಟ್ಟಿಗೆ; **लोष्ट** (ಪು. ನ.) ಮಣ್ಣಿನ ಹೆಂಟೆ; **सम** ಹಾಗೆ ಅಂತೆ] ಮಣ್ಣು ಕಟ್ಟಿಗೆಗಳಂತೆ.

**काहल** (ಪು.) ಧ್ವನಿ, ಸದ್ದು.

**किंनर** (ಪು.) ಕಡಿಮೆ ದೇವತೆಗಳು.

**किंस्वित्** ಏನು, ಎಂಥ ಪದಾರ್ಥ, ಯಾವ ಜಾತಿಯ ವಸ್ತು?

**कितव** (ಪು.) ಠಕ್ಕ, ಮೋಸಗಾರ, ವಂಚಕ.

**कियत्** (ವಿ.) ಎಷ್ಟು.

**किरण** (ಪು.) ಕಿರಣ, ರಶ್ಮಿ.

**किर्मीर** (ಪು.) ಒಬ್ಬ ರಾಕ್ಷಸನ ಹೆಸರು.

**किशोरक** (ಪು.) ಮರಿ (ಸಿಂಹ ಮುಂತಾದ ಪಶುಗಳ).

**कीर्ति** (ಸ್ತ್ರೀ.) ಹೆಸರು, ಯಶಸ್ಸು, ಲೌಕಿಕ.

**कीर्तित** [**परि** ಪೂರ್ವಕ, **कॄत्** (೧೦ನೇ ಗ.) ಹೇಳು] ಹೇಳಿದ, ಎಣಿಸಿದ.

**कु** (ಶಬ್ದಗಳ ಪೂರ್ವದಲ್ಲಿ] ಕೆಟ್ಟ, ಅಸಹ್ಯ, ನಿಂದ್ಯ.

**कुक्कुर** (ಪು.) ನಾಯಿ.

**कुटुम्बक** (ನ.) ಕುಟುಂಬ, ಒಂದು ಮನೆಯ ಜನರು.

**कुट्टिम** (ಪು. ನ.) ನೆಲಗಟ್ಟು, **मणिकुट्टिम** ಮಣಿಗಳಿಂದ ಮಾಡಿದ ನೆಲಗಟ್ಟು.

**कुडव** (ಪು.) ಒಂದು ಮಾಪು, (ಧಾನ್ಯ ಅಳಿಯುವ).

**कुण्डल** (ನ.) ಕಿವಿಯೊಳಗಿನ ಬಾವಲಿ.

**कुण्डिनपुर** (ನ.) ವಿದರ್ಭದ ರಾಜಧಾನಿ.

**कुतूहल** (ನ.) ಅರದು, ಕೌತುಕ.

**कुमारक** (ಪು.) ಹುಡುಗ.

**कुमुद** (ನ.) ಕಮಲ, ಚಂದ್ರವಿಕಾಸಿ ಕಮಲ.

**कुम्भ** (ಪು.) ಗಂಡಸ್ಥಲ.

**कुम्भकर्ण** (ಪು.) ರಾವಣನ ತಮ್ಮನ ಹೆಸರು.

**कुरुक्षेत्र** (ನ.) ಕೌರವ ಪಾಂಡವರಿಗೆ ಯುದ್ಧವಾದ ಸ್ಥಲವು.

**कुल** (ನ.) ಮನೆತನ, ಕುಟುಂಬ, ವಂಶ.

**कुलज** (ವಿ.) ಮನೆತನದಲ್ಲಿ ಹುಟ್ಟಿದ, ಕುಲದಲ್ಲಿ ಹುಟ್ಟಿದ.

**कुश** (ಪು.) **लव** (ಪು.) ರಾಮಚಂದ್ರನ ಮಕ್ಕಳು.

**कुसुमपुर** (ನ.) ಒಂದು ಪಟ್ಟಣ.

**कूल** (ನ.) ದಂಡೆ, ತಟ.

**कृ** (೮ನೇ ಗ. ಉಭ.) ಮಾಡು; **अङ्गी + कृ** ಸತ್ಕರಿಸು, ವಹಿಸು, ಒಪ್ಪಿಕೊಳ್ಳು; **अधि + कृ** ನೇಮಿಸು, ಉದ್ದೇಶಿಸು; **अधि + कृत्य** ಉದ್ದೇಶಿಸಿ; **अप + आ + कृ** ತೆಗೆ, ಕಿತ್ತು ಹಾಕು, ದೂರ ಮಾಡು; **अलं + कृ** ಭೂಷಿಸು, ಅಲಂಕರಿಸು; **आविस + कृ** ಪ್ರಕಟ ಮಾಡು, ತೆರೆ; **उप + कृ** ಒಳಿತು ಮಾಡು; **तिरस् + कृ** ತುಚ್ಛ ಮಾಡು, ಜರಿ, ಹಳಿ; **नमस् + कृ** ನಮಸ್ಕಾರ ಮಾಡು, ಎರಗು; **नि + कृ** ನೋಯಿಸು, ಕೆಡಿಸು; **निस् + आ + कृ** ನಿಷೇಧಿಸು, ಅಲ್ಲಗಳಿಯು, ಬಿಟ್ಟುಬಿಡು; **प्रति + कृ** ಮುಯ್ಯಕ್ಕೆ ಮುಯ್ಯಿ ತೀರಿಸು, ಪ್ರತಿಬಂಧ ಮಾಡು. ಅಡ್ಡಗಟ್ಟು; **वशी + कृ** ಗೆಲ್ಲು, ಅಧೀನ ಮಾಡಿಕೊಳ್ಳು.

**कृ** (೫ನೇ ಗ. ಉಭ.) ಕೊಲ್ಲು.

**कृच्छ्रत्रय** (ನ.) (**कृच्छ्र** ಪ್ರಾಯಶ್ಚಿತ್ತ, **त्रय** ಮೂರು) ಮೂರು ಪ್ರಾಯಶ್ಚಿತ್ತಗಳು.

**कृत्** (೬ನೇ ಗ. ಪ.) ಕಡಿ.

**कृत, कृतयुग** (ನ.) ಮೊದಲನೇ ಯುಗ, ಉತ್ತಮವಾದಂಥಾದ್ದು.

**कृत्तिका** (ಸ್ತ್ರೀ.) ದಕ್ಷನ ತಕ್ಕೊಂಡ ಮಗಳು.

**कृतिन्** (ವಿ.) ಪುಣ್ಯವಂತ, ಭಾಗ್ಯಶಾಲಿ, ಕೃತಕೃತ್ಯನಾದಂಥವ.

**कृते** (ಅ.) ದೆಸೆಯಿಂದ, ಯಾವ ಕಾರಣದಿಂದ.

**कृत्स्न** (ವಿ.) ಎಲ್ಲ, ಸಮಗ್ರ.

**कृपण** (ವಿ.) ಸಣ್ಣ ಮನಸ್ಸಿನ; ನೀಚ.

**कृपानिधि** (ಪು.) [**कृपा** ದಯೆ, ಅಂತಃಕರಣ,

**निधि** (ಸ್ತ್ರೀ.) ಸಂಗ್ರಹ, ಉಗ್ರಾಣ] ದಯುದ ಉಗ್ರಾಣ, ದಯುವುಳ್ಳ, ಕನಿಕರವುಳ್ಳ.

**कृपालु** (ವಿ.) ದಯುವುಳ್ಳ, ಕನಿಕರವುಳ್ಳ.

**कृश** (ವಿ) ಬಡಕ, ಅಶಕ್ತ, ಸಾಮರ್ಥ್ಯವಿಲ್ಲದ.

**कृष्** (೧ನೇ ಗ. ಪ.) ಎಳಿ, ಜಗ್ಗು; **वि** + **प्र** + **कृष्** ದೂರ ಒಯ್ಯು, ಕೆಡಿಸು, ಕಡಿಮೆ ಮಾಡು.

**कृषि** (ಸ್ತ್ರೀ.) ಒಕ್ಕಲತನ.

**कृष्ण** (ಪು.) ವಿಷ್ಣುವಿನ ೮ನೇ ಅವತಾರ.

**कृष्णपक्ष** (ಪು.) ವದ್ಯಪಕ್ಷ.

**कृष्णवर्मन्** (ಪು.) ಒಬ್ಬ ಮನುಷ್ಯನ ಹೆಸರು.

**कृष्णसार** (ಪು.) ಜಿಂಕೆ, ಗಂಡೆರಳೆ.

**कृष्णसाहाय्य** (ನ.) ಕೃಷ್ಣನ ಒತ್ತಾಸೆ.

**कॄ** (೬ನೇ ಗ. ಪ.) ಹರಡು, ಚದರಿಸು; **वि** + **कॄ** ಪಸರಿಸು.

**कॄ** (೯ನೇ ಗ. ಉಭ.) ಕೊಲ್ಲು, ನಾಶಮಾಡು.

**कॄत्** (೧೦ನೇ ಗ.) ಹೊಗಳು, ಗೌರವಿಸು.

**केयूर** (ಪು.) ಬಾಹುಭೂಷಣ.

**केश** (ಪು.) ಕೂದಲು.

**केसरिन्** (ಪು.) ಸಿಂಹ.

**कैतव** (ನ.) ಠಕ್ಕುತನ, ಮೋಸ, ವಂಚನೆ.

**कोटि** (ಸ್ತ್ರೀ) ನೂರು ಲಕ್ಷ; ತುದಿ.

**कोप** (ಪು.) ಸಿಟ್ಟು.

**कोशागार** (ನ.) ಉಗ್ರಾಣ, ಖಜಾನೆಯ ಕೋಣೆ.

**कौमारक** (ನ.) ಹುಡುಗತನ, ಚಿಕ್ಕಪ್ರಾಯ.

**कौरव** (ಪು.) ಕುರು ವಂಶದವ.

**कौन्तेय** (ನ.) ಅಳೋಣ.

**क्रम्** (೧ನೇ ಗ. ಪ., ೪ನೇ ಗ. ಪ.) ನಡಿ, ಹೆಜ್ಜೆ ಇಡು; (ಆ.) ಪರಿಣಮಿಸು, ಭೇದಿಸು, ಫಲಿಸು; **अति**+**क्रम्** ದಾಟು, ಮಿರು; **आ**+**क्रम्** ಸಮೀಪಕ್ಕೆ ಬರು, ತುಳಿ, ಏಳು, ಏರು.

**क्री** (೯ನೇ ಗ. ಉಭ.) ಕೊಳ್ಳು; **निस्**+**क्री** ಒತ್ತೆ ಬಿಡಿಸಿಕೊಳ್ಳು, ಮಾತು ತೀರಿಸು, ತೀರಿಗೆ ಕೊಂಡುಕೊಳ್ಳು, ಹಣಕೊಟ್ಟು ಬಿಡಿಸಿಕೊಳ್ಳು; **वि**+**क्री** ಮಾರು.

**क्रीडाशैल** (ಪು.) [**क्रीडा** (ಸ್ತ್ರೀ.) ಆಟ, ವಿನೋದ, **शैल** (ಪು.) ಪರ್ವತ] ಆಡುವ ಬೆಟ್ಟ.

**क्रुध्** (೪ನೇ ಗ. ಪ.) ಸಿಟ್ಟಾಗು, ಮುನಿ; **अभि**+**सम्**+**क्रुध्** ಸಿಟ್ಟಾಗು.

**क्रुश्** (೪ನೇ ಗ. ಪ. **वि** ಪೂರ್ವಕ) ಅಳು, ಬಿಕ್ಕಿ ಬಿಕ್ಕಿ ಅಳು.

**क्लम्** (೧ನೇ ಗ. ಪ.) ದಣಿ, ಕುಗ್ಗು.

**क्लान्त** (ವಿ.) ದಣಿದ, ಕುಗ್ಗಿದ. ಬಾಡಿದ.

**क्लिद्** (೪ನೇ ಗ. ಪ.) ಹಸಿಯಾಗು, ತೊಯ್ಯು.

**क्लिन्द्** (೧ನೇ ಗ. ಪ.) ದುಃಖ ಪಡು, ಅಳು, ಹಲುಬು.

**क्लिश्** (೯ನೇ ಗ. ಪ.) ದುಃಖ ಕೊಡು, ಗೋಳಾಡಿಸು.

**क्लीब** (ಪು. ನ.) ನಪುಂಸಕ, ದುರ್ಬಲ.

**क्वथ्** (೧ನೇ ಗ. ಪ. **उद्** ಪೂರ್ವಕ) ಕುದಿ, ಬೇಯು.

**क्षण्**, **क्षिण्** (೮ನೇ ಗ. ಪ.) ಗಾಯ ಮಾಡು.

**क्षणध्वंसिन्** (ವಿ.) ಕ್ಷಣಭಂಗುರ, ಕ್ಷಣದಲ್ಲಿ ಸಾಯುವ, ಅಸ್ಥಿರವಾದ ಬಾಳಿಕೆಯುಳ್ಳ.

**क्षणिकत्व** (ನ.) ಅಸ್ಥಿರತ್ವ. ಕ್ಷಣಭಂಗುರತ್ವ.

**क्षत** (**क्षण्** ಧಾ. ಭೂ. ಕೃ.) ನೊಂದ, ಗಾಯವಾದ.

**क्षम्** (೪ನೇ ಗ. ಪ.) ಕ್ಷಮಿಸು.

**क्षमिन्** (ವಿ.) ತಾಳ್ಮೆಯುಳ್ಳ, ಕ್ಷಮಿಸುವ.

**क्षय** (ಪು) ನಾಶ, ಅಂತ.

**क्षिति** (ಸ್ತ್ರೀ.) ಭೂಮಿ, ನೆಲ.

**क्षितीश** (ಪು.) ಅರಸು, ಪೊಡವಿಯಾಣ್ಮ.

**क्षीर** (ನ.) ಹಾಲು.

**क्षुद्** (ನ.) (೭ನೇ ಗ. ಉಭ.) ಜಜ್ಜು, ಕುಟ್ಟು, ಪುಡಿ ಮಾಡು.

**क्षुद्र** (ವಿ.) ಕೀಳ, ಅಲ್ಪ.

**क्षुभ्** (೯ನೇ ಗ. ಪ.) ಅಲ್ಲಾಡಿಸು, ಕಳವಳಿಸು, ಎದೆಗುಂದಿಸು, ಸಿಟ್ಟಾಗು.

**क्षेत्रदेवता** (ಸ್ತ್ರೀ.) ಹೊಲದ ದೇವತೆ, ಭೂಮಿಯ ದೇವತೆ.

**क्षै** (೧ನೇ ಗ. ಪ.) ಕ್ಷೀಣವಾಗು, ಸೊರಗು, ಅಳಿ, ಕುಂದು.

## ख.

**ख** (ನ.) ಮನುಷ್ಯಶರೀರದ ದ್ವಾರಗಳು, ಮೂಗು ಬಾಯಿ ಇತ್ಯಾದಿ.

**खड्गकृष्ट** (ವಿ.) ಕತ್ತಿ ಹಿರಿದವ.

**खलभुजङ्ग** (ಪು.) ಹಾವಿನ ರೂಪವನ್ನು ಹೊಂದಿದ ಖಲ.

**खलु** (ಅ.) ನಿಶ್ಚಯವಾಗಿ.

**खादिर** (ವಿ.) ಖದಿರ ಗಿಡದ.

**खिद्** (೬ನೇ ಗ. ಆ., ೪ನೇ ಗ. ಆ., ೬ ನೇ ಗ ಪ.) ದುಃಖಿತನಾಗು, ಅಸಮಾಧಾನ ಪಡು, ದುಃಖ ಪಡು; ಸಿಟ್ಟಾಗು.

**ख्या** (೨ನೇ ಗ. ಪ.) ಹೇಳು.

## ग.

**गगनमध्य** (ಪು. ನ.) ಆಕಾಶದ ನಡುವಿನ ಭಾಗ.

**गजघटाशत** (ಅ.) ಆನೆಗಳ ನೂರು ಹಿಂಡು.

**गजपुंगव** (ಪು.) ಶ್ರೇಷ್ಠವಾದ ಆನೆ.

**गण्डकी** (ಸ್ತ್ರೀ.) ಒಂದು ನದಿಯ ಹೆಸರು.

**गण्डकीतीर** (ನ.) ಗಂಡಕೀ ನದಿಯ ದಂಡೆ.

**गण्डस्थल** (ನ.) ಗಂಡಸ್ಥಲ.

**गतजीवित** (ವಿ.) ಸತ್ತ.

**गति** (ಸ್ತ್ರೀ.) ನಡಿಗೆ, ಉಪಾಯ, ಆಧಾರ.

**गद्** (೧ನೇ ಗ. ಪ.) ಮಾತಾಡು.

**गदा** (ಸ್ತ್ರೀ.) ದೊಣ್ಣೆ.

**गन्तुकाम** (ವಿ.) ಹೋಗಲಿಚ್ಛಿಸುವ.

**गन्धर्वकन्या** (ಸ್ತ್ರೀ.) ಗಂಧರ್ವನ ಮಗಳು.

**गभीर** (ವಿ.) ಘನ, ಮಂದ.

**गम्** (೧ನೇ ಗ. ಪ.) ಹೋಗು; **अभि+गम्** ದಾಳಿ ಮಾಡು; **प्रति+उद्+गम्** ಕಡೆಗೆ ಹೋಗು.

**गरुड** (ಪು.) ಗರುಡ, ವಿಷ್ಣುವಿನ ವಾಹನವಾದ ಪಕ್ಷಿಯು.

**गरुडाज्ञा** (ಸ್ತ್ರೀ.) ಸರ್ಪಗಳ ಹಗೆಯಾದ ಗರುಡನ ಅಪ್ಪಣೆ.

**गर्भ** (ಪು.) ಬಸುರು.

**गर्भाष्टम** (ವಿ.) [**गर्भ** ಬಸುರು, **अष्टम** ಎಂಟನೇ] ಬಸುರಾದಂದಿನಿಂದ ಎಂಟನೇದು.

**गर्ह्** (೧ನೇ ಗ. ಪ., ೧೦ನೇ ಗ.) ನಿಂದಿಸು, ಜರಿ, ಹಳಿ.

**गल** (ಪು.) ಕುತ್ತಿಗೆ.

**गलित** (ವಿ.) ಬಿದ್ದ, ಸೋರಿದ.

**गहन** (ವಿ.) ದುರ್ಗಮ, ದುಃಸಾಧ್ಯ.

**गहन** (ನ.) ಅರಣ್ಯ, ಅಡವಿ.

**गाण्डीव** (ನ.) ಅರ್ಜುನನ ಬಿಲ್ಲು.

**गात्र** (ನ.) ಶರೀರ, ಅವಯವ.

**गाधोदक** (ನ.) [**गाध** (ವಿ.) ಆಳವಿಲ್ಲದ, **उदक** (ನ.) ನೀರು] ಆಳವಿಲ್ಲದ ನೀರು.

**गान्धर्व** (ಪು.) ಲಗ್ನದ ಒಂದು ವಿಧ, ಇದರಲ್ಲಿ ವಧೂವರರ ಸಮ್ಮತಿ ಇದ್ದರೆ ಸಾಕು.

**गार्हपत्य** (ಪು.) ಗೃಹಸ್ಥರಿಡತಕ್ಕ ಅಗ್ನಿಯು, ಗೃಹಸ್ಥರು ಮಾಡತಕ್ಕ ಕೆಲಸಗಳು.

**गिर्** (ಸ್ತ್ರೀ.) ಮಾತು, ನುಡಿ.

**गुण** (ಪು.) ಪ್ರಯೋಜನ, ಲಾಭ.

**गुप्** (೧ನೇ ಗ. ಪ.) ರಕ್ಷಿಸು.

**गुप्ति** (ಸ್ತ್ರೀ.) ರಕ್ಷಣ, ರಹಸ್ಯಗೋಪನ.

**गुरुता** (ಸ್ತ್ರೀ.) ದೊಡ್ಡಿಸ್ತನ, ವೈಭವ.

**गुर्वी** (ವಿ.) (**गुरु** ಶಬ್ದದ (ಸ್ತ್ರೀ.) ದೊಡ್ಡ.

**गुल्मपाल** (ಪು.) [**गुल्म** (ಪು.) ಕೋಟೆ] ಕೋಟೆ ಕಾಯುವವ.

**गुह्** (೧ನೇ ಗ. ಉಭ.) ಮುಚ್ಚು, ಬಚ್ಚಿಡು.

**गृध्** (೪ನೇ ಗ. ಪ.) ಬಯಸು, ಆಶಿಸು.

**गृह्** (೧ನೇ ಗ. ಆ.) ಜರಿ, ಧಿಕ್ಕರಿಸು, ಒದೆ.

**गृहदेवता** (ಸ್ತ್ರೀ.) ಮನೆಯ ದೇವತೆ.

**गृहमेधिन्** (ಪು.) ಗೃಹಕೃತ್ಯಗಳನ್ನೆಲ್ಲಾ ಮಾಡುವ ಯಜಮಾನ.

**गॄ** (೬ನೇ ಗ. ಪ.) ನುಂಗು; **सम्+गॄ** (ಆ.) ಮಾತು ಕೊಡು.

**गॄ** (೯ನೇ ಗ. ಪ. **सम्** ಪೂರ್ವಕ) ಮಾತಾಡು,

**गो** (ಪು.) ಎತ್ತು, ಹೋರಿ; (ಸ್ತ್ರೀ.) ಆಕಳು, ನುಡಿ, ಭೂಮಿ.

**गोचर** (ಪು.) ಗೊತ್ತು, ಗುರಿ, ಮುಟ್ಟು.

**गोमती** (ಸ್ತ್ರೀ.) ಒಂದು ನದಿಯ ಹೆಸರು.

**गोरोचना** (ಸ್ತ್ರೀ.) ಗೋರೋಚನ, ಅರಸಿನ ಬಣ್ಣದ ಒಂದು ಪದಾರ್ಥ.

**ग्रन्थ्** (೯ನೇ ಗ. ಪ.) ಒಟ್ಟುಗೂಡಿಸು, ಪೋಣಿಸು.

**ग्रन्थि** (ಪು.) ಗಂಟು.

**ग्रह्** (**गॄह्** ೯ನೇ ಗ. ಉಭ.) ತಕ್ಕೊ: **अनु+ग्रह्** ಮಿತ್ರಭಾವದಿಂದ ನಡಿಸು, ದಯ ಮಾಡು; **नि+ग्रह्** ಬಿಗಿದು ಹಿಡಿ, ಅಂಕೆಯಲ್ಲಿ ಇಡು; **वि+ग्रह्** ಜಗಳಾಡು, ಕದನ ಕೆರಿ; **सम्+ग्रह्** ಕೂಡ ಹಾಕು, ಒಟ್ಟುಗೂಡಿಸು.

**ग्रामणी** (ಪು.) ಗ್ರಾಮದ ಮುಖ್ಯಸ್ಥ.

**ग्रावन्** (ಪು.) ಕಲ್ಲು.

**ग्लै** (೧ ೯ ಗ. ಪ.) ದಣಿ, ಕ್ಷೀಣವಾಗು.

**ग्लौ** (ಪು.) ಚಂದ್ರನು.

## घ.

**घण्टिका** (ಸ್ತ್ರೀ) ಸಣ್ಣ ಘಂಟೆ, ಗೆಜ್ಜೆ.

**घर्म** (ಪು.) ಸೆಕೆ, ಕಾವು.

**घर्मज** (ವಿ.) ಕಾವಿನಿಂದ ಹುಟ್ಟುವ, ಸೆಕೆಯಿಂದ ಹುಟ್ಟುವ.

**घस्** (೧ನೇ ಗ. ಪ) ತಿನ್ನು, ಭಕ್ಷಿಸು.

**घोर** (ವಿ.) ಭಯಂಕರವಾದ.

**घ्रा** (೧ನೇ ಗ. ಪ. **उप** ಪೂರ್ವಕ) ಮೂಸು, ಮೂಸಿ ನೋಡು.

## च.

**चकास्** (೨ನೇ ಗ. ಪ.) ಹೊಳೆ, ಮಿಂಚು.

**चक्रवद्गति** (ವಿ.) ಚಕ್ರದಂತೆ ಗತಿಯುಳ್ಳ, ಯಾವಾಗಲೂ ತಿರುಗುವ.

**चक्ष्** (೨ನೇ ಗ. ಆ.) ಮಾತಾಡು; **आ+चक्ष्** ಹೇಳು; **वि+आ+चक्ष्** ವಿವರಿಸು.

**चङ्क्रमण** (ನ.) ಘುಟಿಯೋಣ, ಹಾರೋಣ.

**चण्डकौशिक** (ಪು.) ಒಬ್ಬ ಋಷಿಯ ಹೆಸರು.

**चत्वारः** (ಪ್ರ. ಬಹು.) ನಾಲ್ಕು.

**चन्दन** (ಪು. ನ.) ಗಂಧದ ಕಟ್ಟಿಗೆ.

**चन्दनमञ्जरी** (ಸ್ತ್ರೀ.) [**चन्दन** ಗಂಧದ ಮರ, **मञ्जरी** (ಸ್ತ್ರೀ.) ಹೂವಿನ ಗೊಂಚಲು, ಅಂಕುರ, ಮೊಳಕೆ] ಚಂದನದ ಹೂವಿನ ಗೊಂಚಲು.

**चन्द्रगुप्त** (ಪು.) ಒಬ್ಬ ಅರಸನ ಹೆಸರು.

**चन्द्रापीड** (ಪು.) ಒಬ್ಬ ರಾಜಪುತ್ರನ ಹೆಸರು.

**चम्** (೧ನೇ ಗ. ಪ.) ನೆಕ್ಕು, ಕುಡಿ; **आ+चम्** ಆಚಮನ ಮಾಡು, ಅಂಗೈಯಲ್ಲಿ ಸ್ವಲ್ಪ ನೀರು ತಕ್ಕೊಂಡು ಮಂತ್ರೋಕ್ತವಾಗಿ ಕುಡಿ.

**चम्पककुसुमरेणु** (ಪು.) [**चम्पक** (ಪು.) ಸಂಪಗಿ ಗಿಡ; **रेणु** (ಪು.) ಪುಷ್ಪಧೂಳಿ] ಚಂಪಕ ಹೂವುಗಳೊಳಗಿನ ಧೂಳಿ.

**चम्पकवन** (ನ.) ಸಂಪಗಿ ಗಿಡಗಳ ತೋಪು.

**चर्** (೧ನೇ ಗ. ಪ.) ಹೋಗು, ಅಡ್ಡಾಡು.

**चरणराग** (ಪು.) ಕಾಲ ಬಣ್ಣ, ಕಾಲಿಗೆ ಬಣ್ಣ ಹಚ್ಚೋಣ.

**चरम** (ವಿ.) ಕಡೆಯ.

**चरित** (**चर्** ಧಾತು ಭೂ ಕೃ.) ಮಾಡಿದ.

**चर्चित** (**चर्च्** ಧಾತು ಭೂ. ಕೃ.) ಲೇಪಿಸಿದ, ಪೂಸಿದ, ಹಚ್ಚಿದ.

**चर्मचक्षुस्** (ನ.) [**चर्मन्** (ನ.) ತೊಗಲು, **चक्षुस्** (ನ.) ಕಣ್ಣು] ಕಣ್ಣು, ತೊಗಲಿನ ಕಣ್ಣು.

**चल्** (**प्र+वि** ಪೂರ್ವಕ) ಓರೆ ಮಾಡು, ಓರೆಯಾಗು, ಒತ್ತಟ್ಟಿಗೆ ಸರಿ, ಸರಿಸು.

**चाटु** (ಪು. ನ.) ಇಂಪಾದ ಮಾತು, ಇನಿಮಾತು, ಆರ್ಜವದ ಮಾತು.

**चाणक्य** (ಪು.) ಒಬ್ಬ ಮನುಷ್ಯನ ಹೆಸರು.

**चाण्डाल** (ಪು.) ನೀಚ ಮನುಷ್ಯ, ಹೊಲೆಯ.

**चारणस्तुत** (ವಿ.) [**चारण** (ಪು.) ಭಟ್ಟಂಗಿ] ಭಟ್ಟಂಗಿಗಳಿಂದ ಹೊಗಳಲ್ಪಟ್ಟ.

**चारुदत्त** (ಪು.) ಒಬ್ಬ ಮನುಷ್ಯನ ಹೆಸರು.

**चारुसर्वाङ्गी** (ಸ್ತ್ರೀ.) [**चारु** ಚಲುವ, ರಮ್ಯ; **सर्वाङ्ग** ಯಾವತ್ತು ಅವಯವಗಳು] ರಮ್ಯವಾದ ಎಲ್ಲ ಅವಯವಗಳುಳ್ಳ ಸ್ತ್ರೀ, ಸರ್ವಾಂಗಸುಂದರಿ.

**चार्वङ्गी** (ಸ್ತ್ರೀ.) ಮನೋಹರ ಸ್ತ್ರೀ, ಚಲುವೆ.

**चि** (೫ನೇ ಗ. ಉಭ.) ಕೂಡಿಸು, ಒಟ್ಟುಗೂಡಿಸು; **उप+चि** ಪುಷ್ಟವಾಗು; **निस्+चि** ನಿಶ್ಚಯಿಸು, ತರ್ಕಿಸು, ಗೊತ್ತು ಮಾಡು; **वि+चि** ಹುಡುಕು, ಶೋಧಿಸು, ಆಶಿಸು; **सम्+चि** ಕೂಡ ಹಾಕು, ಸಂಗ್ರಹಿಸು.

**चित्** (೧೦ನೇ ಗ. ಆ.) ಜೀವಿಸು, ನಡಿದಾಡು.

**चित्रवन** (ನ.) ಒಂದು ಅರಣ್ಯ.

**चित्रालाप** (ಪು.) [**चित्र** ತರತರದ, ಸೋಜಿಗದ; **आलाप** (ಪು.) ಸಂಭಾಷಣೆ] ಸೋಜಿಗದ ಮಾತು.

**चित्रित** (ವಿ.) ಭೂಷಿತ, ತರತರದ ಬಣ್ಣವುಳ್ಳ.

**चिरप्रवृत्त** (ವಿ.) ಬಹಳ ದಿವಸದಿಂದ ನಡಿದು ಬಂದ, ಬಹಳ ದಿವಸದಿಂದ ರೂಢವಾಗಿರುವ.

**चिरात्** (ಅ.) ಬಹಳ ಹೊತ್ತಿನ ಮೇಲೆ, ಬಹುಕಾಲದಿಂದ.

**चूत** (ಪು.) ಮಾವಿನ ಮರ; (ನ.) ಮಾವಿನ ಹೂವು.

**चूर्ण** (ಪು.) ಪುಡಿ, ಹುಡಿ.

**चूर्णवत्** (ಪು.) ಪುಡಿಯಂತೆ, ಪುಡಿಯಾಗುವಂತೆ.

**चेत्** (ಅ.) ಆದರೆ.

**चेतस्** (ನ.) ಮನಸ್ಸು, ಹೃದಯ, ಬುದ್ಧಿ.

**चैत्र** (ಪು.) ಹಿಂದು ವರ್ಷದ ಮೊದಲನೇ ತಿಂಗಳು.

**चैत्ररथ** (ಪು.) ಗಂಧರ್ವರ ದೇಶ, ಕುಬೇರನ ತೋಟ.

### छ.

**छद्** (೧೦ನೇ ಗ. **प्र** ಪೂರ್ವಕ) ಮುಚ್ಚು, ಮರೆ ಮಾಡು.

**छन्दस्** (ನ.) ವೃತ್ತ.

**छल** (ನ.) ಮೋಸ, ತಗಲು.

**छादन** (ನ.) ಮುಚ್ಚಳ, ಹೊದಿಕೆ, ಮುಚ್ಚೋಣ.

**छिद्** (೧೦ನೇ ಗ. ೭ನೇ ಗ. ಉಭ.) ಕತ್ತರಿಸು, ಕಡಿ, ತುಂಡು ಮಾಡು.

### ज.

**जक्ष्** (೨ನೇ ಗ. ಪ.) ತಿನ್ನು.

**जगदात्मन्** (ಪು.) [**जगत्** ಲೋಕ, ವಿಶ್ವ; **आत्मन्** (ಪು.) ಆತ್ಮ] ವಿಶ್ವಾತ್ಮ.

**जगन्नाथ** (ಪು.) [**जगत्** ಲೋಕ, ವಿಶ್ವ; **नाथ** (ಪು.) ಒಡೆಯ] ಲೋಕದ ಒಡೆಯ.

**जगन्नायक** (ಪು.) ಲೋಕನಾಥ.

**जघनार्ध** (ನ.) **जघन** (ನ.) ತಿಗ, ಹಿಂಭಾಗ; **अर्ध** ಅರ್ಧ] ತಿಗದ ಹಿಂಭಾಗ.

**जङ्घा** (ಸ್ತ್ರೀ.) ತೊಡೆ.

**जटा** (ಸ್ತ್ರೀ.) ಜಡೆ.

**जटिल** (ವಿ.) ಬೆರೆತ, ಕೂಡಿದ, ಜಡಿಯುಳ್ಳ.

**जड** (ವಿ.) ಅಚೇತನ.

**जन्** (**सम्** ಪೂರ್ವಕ) ಹುಟ್ಟು, ಉಂಟಾಗು, ಹೆಸರಿಗೆ ಬರು.

**जनमेजय** (ಪು.) ಪರೀಕ್ಷಿತರಾಯನ ಮಗ, ಅರ್ಜುನನ ಮರಿಮಗ.

**जनय** (**जन्** ಧಾತು ಪ್ರೇರ.) ಉಂಟುಮಾಡು, ಹುಟ್ಟಿಸು, **जनयितुम्** ಹುಟ್ಟಿಸಲಿಕ್ಕೆ.

**जनार्दन** (ಪು.) ಕೃಷ್ಣನ ಹೆಸರು.

**जन्तु** (ಪು.) ಪ್ರಾಣಿ.

**जन्मभाज्** (ವಿ.) ಜನ್ಮ ತಕ್ಕೊಂಡ; (ಪು.) ಮನುಷ್ಯ.

**जन्मान्तर** (ನ.) [**अन्यजन्म=जन्मान्तरम्**] ಮತ್ತೊಂದು ಜನ್ಮ.

**जप्** (೧ನೇ ಗ. ಪ.) (ಮಂತ್ರ) ಅನ್ನು.

**जम्बुमालिन्** (ಪು.) ಒಬ್ಬ ರಾಕ್ಷಸನ ಹೆಸರು.

**जय** (ಪು.) ಗೆಲವು.

**जयावह** (ವಿ.) ಗೆಲವು ಕೊಡುವ.

**जागृ** (೨ನೇ ಗ. ಪ.) ಎಚ್ಚರು, ಮಲಗದೆ ಇರು.

**जाड्य** (ನ.) ಮಂದತನ, ಆಲಸ್ಯ.

**जात** (ನ.) ಗುಂಪು.

**जातकर्मन्** (ನ.) ಹದಿನಾರು ಸಂಸ್ಕಾರಗಳಲ್ಲಿ ಒಂದು.

**जातवेदस्** (ಪು.) ಅಗ್ನಿ, ಬೆಂಕಿ.

**जानंतपि** (ಪು.) ಜನಂತಪನ ಮಗ.

**जानु** (ನ.) ಮೊಣಕಾಲು.

**जाया** (ಸ್ತ್ರೀ.) ಹೆಂಡತಿ, ಹೆಂಗಸು.

**जाह्नवी** (ಸ್ತ್ರೀ.) ಭಾಗೀರಥಿ.

**जीवन** (ನ.) ಉದರಪೋಷಣ.

**जीवनाशा** (ಸ್ತ್ರೀ.) [**जीवन** (ನ.) ಬದುಕೋಣ; **आशा** (ಸ್ತ್ರೀ.) ಕೋರಿಕೆ, ಬಯಕೆ] ಬದುಕುವ ಇಚ್ಛೆ.

**जीवलोक** (ಪು.) ಭೂಲೋಕ, ಮನುಷ್ಯ ಲೋಕ.

**जीवित** (ನ.) ಇರುವಿಕೆ.

**जीवितलघूकृत** (ವಿ.) ಜೀವಿಸಿರುವದರಿಂದ ಸ್ವಲ್ಪೇ ಕಡಿಮೆ ಯೋಗ್ಯತೆಯನ್ನು ಹೊಂದಿದ.

**जृम्भ्** (**सम्+उद्** ಪೂರ್ವಕ ೧ನೇ ಗ. ಆ.) ಪ್ರಯತ್ನಿಸು, ಉದ್ಯೋಗಿಸು, ಸಾಧಿಸು, ಕಡೆಗಾಣಿಸು.

**जॄ** (೧ನೇ ಗ., ೪ನೇ ಗ., ೯ನೇ ಗ. ಪ., ೧೦ನೇ ಗ.) ಮುಪ್ಪಾಗು, ಕ್ಷೀಣವಾಗು, ಸವಿ, ಹಳೇದಾಗು.

**जैन** (ಪು.) ಜಿನಭಕ್ತ, ಜೈನ.

**ज्ञा** (**जा**, ೯ನೇ ಗ. ಉಭ.) ತಿಳಿ, ಅರಿ. **अनु+ज्ञा** ಅಪ್ಪಣೆ ಕೊಡು; **अभि+ज्ञा** ಗೊತ್ತುಹಿಡಿ, ಒಪ್ಪಿಕೊಳ್ಳು.

**ज्ञानमार्ग** (ಪು.) [**ज्ञान** (ನ.) ಅರಿವು, ತಿಳುವಳಿಕೆ; **मार्ग** (ಪು.) ದಾರಿ] ಈಶ್ವರನನ್ನು ತಿಳುಕೊಂಡು ಸಾಯುಜ್ಯಸುಖವನ್ನು ಪಡಿಯುವ ಮಾರ್ಗ.

**ज्वल्** (೧ನೇ ಗ. ಪ.) ಉರಿ, ಸುಡು, ಮಿಂಚು.

## त.

**तक्ष्** (೧ನೇ ಗ. ಪ.) ಕೆತ್ತು, ಚೋಳಿಸು; **सम्+तक्ष्** ತುಂಡಿಸು, ಗಾಯ ಮಾಡು, ದುಃಶಬ್ದಗಳಿಂದ ತರಿ.

**तट** (ಪು. ನ.) ದಂಡೆ.

**तत** (ಪು.) ಅಚ್ಚದ ಹೆಸರು (ಮಗ ಅಥವಾ ತಂದೆ).

**तत्त्ववेदिन्** (ವಿ.) ತತ್ವ ಬಲ್ಲವ, ತತ್ವಜ್ಞಾನಿ.

**तदीय** (ವಿ.) ಅವನ.

**तद्वत्** (ಅ.) ಅದರಂತೆ, ಅದರ ಹಾಗೆ.

**तद्विषयक** (ವಿ.) ಆ ವಿಷಯದ, ಅವನಿಗೆ ಸಂಬಂಧಿಸಿದ.

**तन्** (೮ನೇ ಗ. ಉಭ.) ಪಸರಿಸು, ಎಳಿ, ಯಜ್ಞ ಮಾಡು; **प्र+तन्** ಪಸರಿಸು, ಹರಸು.

**तनय** (ಪು.) ಮಗ.

**तनु, तनू** (ಸ್ತ್ರೀ.) ಶರೀರ, ಮೈ.

**तन्तु** (ಪು.) ಧಾರ, ಎಳೆ.

**तन्त्री** (ಸ್ತ್ರೀ.) ವೀಣೆ, ತಂಬೂರಿ.

**तन्द्रय** [ನಾಮಸಾಧಿತ ಧಾತು **तन्द्रा** (ಸ್ತ್ರೀ.) ಆಲಸ್ಯ, ಮಂದತನ] ಮೈಗಳ್ಳನಾಗು, ಸೋಮಾರಿಯಾಗು.

**तन्मध्ये** (ನ.) ಅದರ ಮಧ್ಯದಲ್ಲಿ, ಅದರೊಳಗೆ.

**तप्** (೧ನೇ ಗ. ಪ.) ತಪ ಮಾಡು.

**तप्** (೪ನೇ ಗ. ಆ. **सम्** ಪೂರ್ವಕ) ವ್ಯಸನ ಪಡು, ಖಿನ್ನವಾಗು, ದುಃಖ ಪಡು.

**तपन** (ಪು.) ಶ್ರಮ ಪಡಿಸುವವ, ತಿಪ್ಪಲುಗಾರ.

**तपोधन** (ಪು.) ತಾಪಸಿಯು, ತಪಸ್ಸೆಂಬ ಧನವುಳ್ಳವನು.

**तम्** (೪ನೇ ಗ. ಪ.) ದುಃಖ ಪಡು, ಖಿನ್ನವಾಗು.

**तरी** (ಸ್ತ್ರೀ.) ನಾವೆ, ಡೋಣಿ.

**तर्ज्** (೧ನೇ ಗ. ಪ., ೧೦ನೇ ಗ. ಆ.) ಬೆದರಿಸು, ಗದರಿಸು, ಸಿಟ್ಟು ಮಾಡು.

**तादृश्** (ವಿ.) ಅದರಂತೆ, ಅದರ ಹಾಗೆ.

**ताप** (ಪು.) ಸೆಕೆ.

**ताय्** (೧ನೇ ಗ. ಆ.) ಪಸರಿಸು, ಹರಹು.

**तार** (ನ.) ಕರ್ಕಶಧ್ವನಿ; (ವಿ.) ಕರ್ಕಶವಾದ.

**तावत्कालम्** (ಅ.) ಅಷ್ಟು ದೀರ್ಘಕಾಲದ ವರೆಗೆ.

**तावत्** (ಅ.) ಆ ಕಾಲಕ್ಕೆ, ಅಷ್ಟರಲ್ಲಿ.

**तिग्म** (ವಿ.) ಕಠಿಣವಾದ, ನಿಷ್ಠುರವಾದ.

**तिथि** (ಸ್ತ್ರೀ.) ತಿಂಗಳ ದಿವಸ.

**तिमिर** (ಪು. ನ.) ಕತ್ತಲೆ, ಮಬ್ಬು.

**तिर्यच्** (ಪು.) ಕಡಿಮೆ ಪ್ರಾಣಿ, ಕ್ಷುದ್ರ ಜಂತು. (ವಿ.) ಓರೆಯಾದ.

**तीर्थोदक** (ನ.) [**तीर्थ** (ನ.) ಪವಿತ್ರ ಸ್ಥಳ; **उदक** (ನ.) ನೀರು] ಪವಿತ್ರವಾದ ನೀರು.

**तुमुल** (ವಿ.) ಉಗ್ರ, ಪ್ರಚಂಡವಾದ, ಘೋರ.

**तुरग** (ಪು.) ಕುದುರೆ.

**तुरासाह्** (ಪು.) ಇಂದ್ರನ ಹೆಸರು.

**तूर्णम्** (ಅ.) ತೀವ್ರ.

**तृणराजफल** (ನ.) [**तृणराज** (ಪು.) ತಾಲ ವೃಕ್ಷ] ತಾಲವೃಕ್ಷದ ಫಲ.

**तृप्** (೪ನೇ ಗ. ಪ.) ಸಂತುಷ್ಟನಾಗು.

**तृष्** (೪ನೇ ಗ. ಪ.) ನೀರಡಿಸು.

**तृष्णा** (ಸ್ತ್ರೀ.) ಅತ್ಯಾಶೆ, ಲೋಭ.

**तृह्** (೭ನೇ ಗ. ಪ.) ಕೊಲ್ಲು, ನಾಶಮಾಡು.

**तेजस्विन्** (ವಿ.) ತೇಜವುಳ್ಳ, ವೈಭವವುಳ್ಳ, ಪ್ರಸಿದ್ಧ.

**तोय** (ನ.) ನೀರು.

**त्याग** (ಪು.) ದಾನ, ಬಿಟ್ಟುಬಿಡುವದು, ಧರ್ಮ ಮಾಡುವದು.

**त्रय** (ನ.) ಮೂರು, ಮೂವರು.

**त्रस्** (೧ನೇ, ೪ನೇ ಗ. ಪ.) ಅಂಜು, ನಡುಗು; **सम्+त्रस्** ಅಂಜು, ಭಯಪಡು.

**त्राण** (ನ.) ರಕ್ಷಣೆ, ಪಾಲನೆ.

**त्रिः** (ಅ.) ಮೂರು ಸಾರಿ.

**त्रिवर्ग** (ಪು.) ಮೂವರ ಕೂಟ, ಧರ್ಮ ಅರ್ಥ ಕಾಮಗಳ ಕೂಟ.

**त्रिविष्टपास्थान** (ನ.) [**त्रिविष्टप** (ನ.) ಸ್ವರ್ಗ. **आस्थान** (ನ.) ಕೂಟ, ಸಭೆ] ದೇವತೆಗಳ ಸಭೆ.

**त्रुट्** (೪ನೇ ಗ., ೬ನೇ ಗ. ಪ.) ಒಡಿ, ಹರಿ.

**त्रेता** (ಸ್ತ್ರೀ.) ಎರಡನೆಯ ಅಥವಾ ಬೆಳ್ಳಿಯುಗ.

**त्रैलोक्य** (ನ.) ಮೂರು ಲೋಕಗಳು.

**त्र्यम्बक** (ಪು.) ಶಿವನ ಹೆಸರು.

**त्विष्** (ಸ್ತ್ರೀ.) ಕಾಂತಿ, ಮಿಂಚು.

## द.

**दंश्** (೧ನೇ ಗ. ಪ., ೧೦ನೇ ಗ. ಅ.) ಕಚ್ಚು, ಕಡಿ.

**दंष्ट्रा** (ಸ್ತ್ರೀ.) ದವಡೆ ಹಲ್ಲು, ಕೋರೆ.

**दंष्ट्रिन्** (ಪು.) ಹಾವು, ಮೊನೆಯಾದ ಕೋರೆಯುಳ್ಳ ಜಂತು.

**दक्षिण** (ವಿ.) ದಕ್ಷಿಣದ; (ನ.) ದಕ್ಷಿಣ.

**दक्षिणीय** (ವಿ.) ದಾನಕ್ಕೆ ಅರ್ಹವಾದ.

**दत्** (ಪು.) ಹಲ್ಲು.

**दत्त्वा** (ಅ.) ಕೊಟ್ಟು.

**दद्** (೧ನೇ ಗ. ಪ.) ಕೊಡು.

**ददत्** (ವ. ಕೃ.) ಕೊಡುವ.

**दधि** (ನ.) ಮೊಸರು.

**दन्त** (ಪು.) ಹಲ್ಲು.

**दन्तशूक** (ಪು.) ಹಾವು.

**दमयन्ती** (ಸ್ತ್ರೀ.) ಒಬ್ಬ ಸ್ತ್ರೀಯ ಹೆಸರು. ನಳರಾಜನ ಹೆಂಡತಿ.

**दम्पती** (ಪು. ದ್ವಿವಚನಾಂತ) ಗಂಡಹೆಂಡರು.

**दम्भ** (ಪು.) ಡಾಂಭಿಕತನ.

**दय्** (೧ನೇ ಗ. ಅ.) ದಯಮಾಡು, ಪ್ರೀತಿ ಮಾಡು.

**दयालुत्व** (ಪು.) ಪ್ರೀತಿ, ಕೋಮಲಾಂತಃಕರಣ

**दरिद्र** (ವಿ.) ಬಡ, ತಿರುಕ, ದಿಕ್ಕಿಲ್ಲದ.

**दरिद्रा** (೨ನೇ ಗ. ಪ.) ಬಡವನಾಗು.

**दर्प** (ಪು.) ಅಹಂಕಾರ, ಗರ್ವ, ಅಭಿಮಾನ.

**दल्** (೧ನೇ ಗ. ಪ.) ಒಡಿ, ಹರಿ, ಕಡಿ.

**दशन** (ಪು.) ಹಲ್ಲು.

**दशम** (ವಿ.) ಹತ್ತನೆ.

**दशा** (ಸ್ತ್ರೀ.) ಸ್ಥಿತಿ, ಅವಸ್ಥೆ.

**दह्** (೧ನೇ ಗ. ಪ.) ಸುಡು.

**दा** (೩ನೇ ಗ. ಉಭ.) ಕೊಡು.

**दा** (೨ನೇ ಗ. ಪ.) ತುಂಡಿಸು.

**दानव** (ಪು.) ರಾಕ್ಷಸ.
**दारक** (ಪು.) ಗಂಡುಕೂಸು, ಮಗ.
**दाव** (ಪು.) ಕಾಡಗಿಚ್ಚು, ಅಡವಿ.
**दाशरथि** (ಪು.) ದಶರಥನ ಮಗ.
**दिगन्त** (ಪು.) ದಿಕ್ಕುಗಳ ಅಂತ್ಯಭಾಗ, ನಾಲ್ಕೂ ಕಡೆಯ ದೇಶಗಳು.
**दिग्विजय** (ಪು.) [**दिश्** (ಸ್ತ್ರೀ.) ದಿಕ್ಕು; **विजय** (ಪು.) ಗೆಲುವು] ಯಾವತ್ತು ದೇಶಗಳನ್ನು ಗೆಲುವಿಕೆ.
**दिदृक्षु** (ವಿ.) ನೋಡಲಿಕ್ಕೆ ಇಚ್ಛಿಸುವವ.
**दिनेदिने** (ಅ.) ಪ್ರತಿ ದಿನ, ದಿನಾಲು.
**दिव्** (ಸ್ತ್ರೀ.) ದಿನ, ಸ್ವರ್ಗ, ಆಕಾಶ.
**दिवा** (ಅ.) ಹಗಲು.
**दिव्य** (ವಿ.) ಸುಂದರವಾದ, ಸ್ವರ್ಗೀಯ.
**दिव्याश्रमपद** (ನ.) [**दिव्य, आश्रमपद** ಪರ್ಣಶಾಲೆ] ಸುಂದರವಾದ ಪರ್ಣಶಾಲೆ.
**दिश्** (ಸ್ತ್ರೀ.) ದಿಕ್ಕು, ಭೂಭಾಗ.
**दिह्** (೨ನೇ ಗ. ಉಭ.) ಲೇಪಿಸು, ಸಾರಿಸು, ಪೂಸು.
**दीक्ष्** (೧ನೇ ಗ. ಆ.) ಶುದ್ಧವಾಗಿ ಯಜ್ಞಮಾಡಲಿಕ್ಕೆ ತಕ್ಕವನಾಗು.
**दीन** (ವಿ.) ಬಡ, ಕಂಗಾಲ, ದಿಕ್ಕಿಲ್ಲದ.
**दीनबन्धु** (ಪು.) ದಿಕ್ಕಿಲ್ಲದವರಿಗೆ ನೆರವಾಗುವವ. ಬಡವರ ಕಲ್ಯಾಣ ಮಾಡುವವ.
**दीनार** (ಪು.) ಒಂದು ನಾಣ್ಯ (ರೋಮನ್ನರದು).
**दीप्** (೪ನೇ ಗ. ಪ.) ಹೊಳಿ, ಮಿಂಚು.
**दीपक** (ವಿ.) ಪ್ರಕಾಶಿಸುವ, ಹೊಳೆಯುವ, ಮಿಂಚುವ.
**दीप्ति** (ಸ್ತ್ರೀ.) ಪ್ರಕಾಶ, ಮಿಂಚು, ತೇಜ.
**दीर्घम्** (ಅ.) ಬಹುಕಾಲ, ಬಹಳ.
**दु** (೫ನೇ ಗ. ಪ.) ನೋಯಿಸು, ಪೀಡಿಸು, ಕಷ್ಟ ಪಡಿಸು, ಬಳಲು.
**दुःखपीडित** (ವಿ.) ದುಃಖದಿಂದ ಬಳಲುವ.
**दुःखभाज्** (ವಿ.) ದುಃಖ ಭೋಗಿಸುವ, ದೈವಗೇಡಿ
**दुःखसन्ताप** (ಪು.) [**सन्ताप** (ಪು.) ಬಳಲುವಿಕೆ, ಕ್ಷೋಭ] ದುಃಖದ ಗೋಳಾಟ, ಪೇಚಾಟ.
**दुःखित** (ವಿ.) ದುಃಖ ಪಟ್ಟ, ಕಷ್ಟ ಪಟ್ಟ.
**दुग्ध** (ನ.) ಹಾಲು.
**दुरन्त** (ವಿ.) ಅಂತ ನಿಲುಕದ, ಅನಂತ.
**दुराप** (ವಿ.) ಕಷ್ಟಸಾಧ್ಯ.
**दुरुक्त** (ನ.) ಕೆಟ್ಟ ಮಾತು, ಅಸ್ಪಷ್ಟವಾಗಿ ನುಡಿದ ಮಾತು.
**दुर्ग** (ನ.) ದುರ್ಗಮವಾದ ಅಡಚಣೆಯ ಸ್ಥಳ, ಕೋಟೆ.
**दुर्गत** (ವಿ.) ಕಂಗೆಟ್ಟ, ದುಃಖಪಟ್ಟ, ದೈವಗೇಡಿಯಾದ.
**दुर्दम** (ವಿ.) ಮಣಿಯದಂಥ, ಬಹು ಪ್ರಯಾಸದಿಂದ ವಶವಾಗುವಂಥ.
**दुर्धर्ष** (ವಿ.) ಅಗಮ್ಯ, ಹೋಗಲಸಾಧ್ಯವಾದ.
**दुर्नीति** (ನ.) ಕೆಟ್ಟ ಕೆಲಸ, ನಾಚಿಕೆಗೆಟ್ಟ ಕೆಲಸ.
**दुर्बुद्ध** (ವಿ.) ತಿಳಿಯಲಿಕ್ಕೆ ಕಠಿಣವಾದ, ತಿಳಿಯದಂಥ, ಗೂಢ.
**दुर्मुख** (ವಿ.) ಕೆಟ್ಟ ಮೋರೆಯುವ, ಕೆಟ್ಟ ಮಾತು ಆಡುವವ.
**दुर्योधनभीमसेनौ** (ಪು. ದ್ವಿವಚನಾಂತ) ದುರ್ಯೋಧನಭೀಮಸೇನರು.
**दुर्विदग्ध** (ವಿ.) ತನ್ನ ಶಹಾಣೆತನದ ದುರಭಿಮಾನವುಳ್ಳವ.
**दुर्विनीत** (ವಿ.) ನಾಚಿಕೆಗೆಟ್ಟ, ಹುಂಬ.
**दुष्कृत** (ನ.) ದುಷ್ಟ ಕೆಲಸ, ದುಷ್ಟತನ, ಪಾಪ.
**दुष्ट** (ವಿ.) ದುರುಳ, ನೀಚ, ಕೆಟ್ಟ.
**दुस्तर** (ವಿ.) ಪಾರಾಗಲಿಕ್ಕೆ ಕಠಿಣವಾದ, ಅಪರಿಹಾರ್ಯ.
**दुह्** (೨ನೇ ಗ. ಉಭ.) ಹಿಂಡು, ಹಾಲು ಕರೆ.
**दू** (೪ನೇ ಗ. ಆ.) ಖಿನ್ನನಾಗು, ನೊಂದುಕೊಳ್ಳು
**दृ** (೬ನೇ ಗ. ಆ. **आ** ಪೂರ್ವಕ) ಮರ್ಯಾದೆ ಮಾಡು, ಮನ್ನಿಸು.
**दृढ** (ವಿ.) ಗಟ್ಟಿಯಾದ, ಬಲವಾದ.
**दृप्** (೪ನೇ ಗ. ಪ.) ಗರ್ವಿಸು, ಅಹಂಕರಿಸು.
**दृश्** (ಸ್ತ್ರೀ.) ದೃಷ್ಟಿ, ಕಣ್ಣು.
**दॄ** (೯ನೇ ಗ. ಪ.) ಹರಿ.
**देव** (ವಿ.) ಮಿಂಚುವ, ಮಿಂಚುಳ್ಳ.

**देवकी** (ಸ್ತ್ರೀ.) ಕೃಷ್ಣನ ತಾಯಿ.

**देवक्षेत्र** (ನ.) ದೇವತೆಗಳ ಭೂಮಿ.

**देवता** (ಸ್ತ್ರೀ.) ದೇವತೆ.

**देवशुनी** (ಸ್ತ್ರೀ.) ದೇವತೆಗಳ ಹೆಣ್ಣುನಾಯಿ.

**देवेज्** (ಪು.) ದೇವತೆಗಳನ್ನು ಪೂಜಿಸುವವರು.

**देश** (ಪು.) ದೇಶ.

**देहिन्** (ಪು.) ಶರೀರವುಳ್ಳವನು, ಮನುಷ್ಯ; (ವಿ.) ದೇಹವುಳ್ಳ.

**दै** (೧ನೇ ಗ. ಪ. **अव** ಪೂರ್ವಕ) ಸ್ವಚ್ಛ ಮಾಡು, ಹಸನ ಮಾಡು.

**दो** (೪ನೇ ಗ. ಪ. **अव** ಪೂರ್ವಕ) ತುಂಡಿಸು, ಕಡಿ.

**दोष** (ಪು.) ಆಕ್ಷೇಪಣೆ, ಅಪದೂರು, ನಿಂದೆ.

**दोषन्** (ಪು. ನ.) ತೋಳು.

**दोहनकाल** (ಪು.) [**दोहन** (ನ.) ಹಿಂಡೋಣ; **काल** (ಪು.) ಹೊತ್ತು] ಹಿಂಡುವ ಹೊತ್ತು.

**दौर्बल्य** (ನ.) ಅಶಕ್ತತನ, ಬಲಹೀನತ್ವ.

**दौर्मन्त्र्य** (ನ.) ಕೆಟ್ಟ ಆಲೋಚನೆ.

**द्युति** (ಸ್ತ್ರೀ.) ಕಾಂತಿ, ಮೈಬಣ್ಣ.

**द्युम्न** (ನ.) ಸಂಪತ್ತು, ದ್ರವ್ಯ.

**द्यो** (ಸ್ತ್ರೀ.) ಸ್ವರ್ಗ.

**द्रविण** (ನ.) ದ್ರವ್ಯ, ದುಡ್ಡು.

**द्रव्य** (ನ.) ಒಡವೆ, ಪದಾರ್ಥ.

**द्रु** (೧ನೇ ಗ. ಪ.) ಓಡು.

**द्रोण** (ಪು.) ಒಬ್ಬ ಮನುಷ್ಯನ ಹೆಸರು.

**द्वय** (ನ.) ಜೋಡು.

**द्वयी** (ಸ್ತ್ರೀ.) ಎರಡು ಪಾಲು.

**द्वाःस्थ** (ಪು.) ಬಾಗಿಲು ಕಾಯುವವ, ಬಾಗಿಲಲ್ಲಿ ನಿಂತವ.

**द्वापर** (ಪು.) ಮೂರನೇ ಯುಗ.

**द्वार** (ನ.) ಬಾಗಿಲು, ಅಗಸೆಬಾಗಿಲು.

**द्वारपाल** (ಪು.) ಬಾಗಿಲ ಕಾಯುವವ.

**द्विगुण** (ವಿ.) ಎರಡು ಪಾಲು.

**द्विजन्मन्** (ಪು.) [**द्वि** ಎರಡು; **जन्मन्** (ನ.) ಹುಟ್ಟು, ಜನ್ಮ] ಎರಡು ಜನ್ಮವುಳ್ಳವ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಜಾತಿಗಳ ಒಬ್ಬ ಮನುಷ್ಯ, ಬ್ರಾಹ್ಮಣ.

**द्विजिह्व** (ಪು.) [**जिह्वा** (ಸ್ತ್ರೀ.) ನಾಲಿಗೆ] ಎರಡು ನಾಲಿಗೆಯುಳ್ಳ ಹಾವು.

**द्विजोत्तम** (ಪು.) ಬ್ರಾಹ್ಮಣಶ್ರೇಷ್ಠನು.

**द्विष्** (೨ನೇ ಗ. ಉಭ.) ಹಗೆ ಮಾಡು. ದ್ವೇಷಿಸು.

**द्विष्** (ಪು.) ಹಗೆ, ಶತ್ರು.

## ध.

**धनाशा** (ಸ್ತ್ರೀ.) ದ್ರವ್ಯದ ಆಶೆ.

**धनुर्ज्या** (ಸ್ತ್ರೀ.) ಬಿಲ್ಲಿನ ಹದೆ.

**धमनी** (ಸ್ತ್ರೀ.) ಕೊಳವೆ, ಊದುಗೊಳವೆ.

**धराधिप** (ಪು.) ಭೂಮಿಯೊಡೆಯ, ಅರಸು.

**धरित्री** (ಸ್ತ್ರೀ.) ಪೃಥ್ವಿ, ಭೂಮಿ.

**धर्मदूषण** (ವಿ.) ಒಳ್ಳೇ ಕೆಲಸವನ್ನು ಕೆಡಿಸುವವ.

**धर्मषष्ठांशभाग** (ಪು.) ಪುಣ್ಯದ ಆರನೇ ಪಾಲಿನ ಭಾಗ.

**धर्मसूत्रकार** (ಪು.) [**धर्म** (ಪು.) ಕಾಯದೆ, ಶಾಸ್ತ್ರ; **सूत्र** (ನ.) ಕಟ್ಟಳೆ, ನಿಯಮ] ಧರ್ಮಶಾಸ್ತ್ರದ ಕಟ್ಟಳೆಗಳನ್ನು ಬರೆಯುವವ.

**धा** (೩ನೇ ಗ. ಉಭ.) ಹಾಕು, ಇಡು, ಹಿಡಿ, **अपि** ಅಥವಾ **पि+धा** ಮುಚ್ಚು; **अव+धा** ಲಕ್ಷ್ಯಕೊಡು, **नि+धा** ಇಡು **परि+धा** ಹೊರು, ಉಡು, ತೊಡು; **पुरस्+धा** ಒಬ್ಬನನ್ನು ಪುರೋಹಿತನನ್ನಾಗಿ ಮಾಡು; **वि+धा** ಮಾಡು, ಸಾಧಿಸು, ಅಪ್ಪಣೆಮಾಡು; **सम+धा** ಒಡಂಬಡಿಕೆ ಮಾಡು. ಜೋಡಿಸು.

**धात्री** (ಸ್ತ್ರೀ.) ದಾದಿ.

**धामन्** (ನ.) ತೇಜ, ಮಿಂಚು.

**धारा** (ಸ್ತ್ರೀ.) ಧಾರೆ, ಕತ್ತಿಬಾಯಿ.

**धि** (೬ನೇ ಗ. ಪ. **सम्** ಪೂರ್ವಕ) ಒಡಂಬಡಿಕೆ ಮಾಡು, ಒಪ್ಪಂದ ಮಾಡು.

**धिक्** (ಅ.) ಛೀ (ಧಿಕ್ಕರಿಸು).

**धी** (ಸ್ತ್ರೀ.) ಬುದ್ಧಿ.

**धीवर** (ಪು.) ಬೆಸ್ತ, ಮೀನುಬಲೆಗಾರ.

**धु** ಅಥವಾ **धू** (೫ನೇ ಗ. ಉಭ.) ಅಲ್ಲಾಡಿಸು.

**धुर्** (ಸ್ತ್ರೀ.) ನೊಗ.

**धू** (೧ನೇ ಗ., ೯ನೇ ಗ. ಉಭ., ೬ನೇ ಗ. ಪ.) ಅಲ್ಲಾಡಿಸು, ಚಲಿಸು.

**धू** [**धून्**] (೧೦ನೇ ಗ. **वि** ಪೂರ್ವಕ) ಅಲ್ಲಾಡಿಸು.

**धूप्** (೧ನೇ ಗ. ಪ.) ಕಾಸು, ಬಿಸಿ ಮಾಡು.

**धूप** (ಪು.) ಧೂಪ.

**धूर्त** (ಪು.) ಠಕ್ಕ, ಮೋಸಗಾರ.

**धूसर** (ವಿ.) ಮಲಿನವಾದ, ಮಣ್ಣಿನ ಬಣ್ಣದ.

**धृ** (**अव** ಪೂರ್ವಕ ೧೦ನೇ ಗ. ಅಥವಾ ಪ್ರೇರಣಾರ್ಥಕ) ಅರಿ, ತಿಳಿ, ನಿಶ್ಚಯಿಸು.

**धृ** (**उद्** ಪೂರ್ವಕ) ಮೇಲಕ್ಕೆ ಎತ್ತು, ರಕ್ಷಿಸು, ಉದ್ಧಾರ ಮಾಡು.

**धृष्** (೫ನೇ ಗ. ಪ.) ಯುದ್ಧಕ್ಕೆ ಕರಿ.

**धे** (೧ನೇ ಗ. ಪ.) ಕುಡಿ, ಮೊಲೆ ಕುಡಿ, ಚೀಪು.

**धैर्यधन** (ವಿ.) ಧೈರ್ಯವೇ ಧನವಾಗಿರುವವ.

**ध्मा** (೧ನೇ ಗ. ಪ.) ಊದು.

**ध्यै** (೧ನೇ ಗ. ಪ.) ಆಲೋಚಿಸು; **अनु+ध्यै** ಆಲೋಚಿಸು, ಧ್ಯಾನ ಮಾಡು.

**ध्रुवम्** ಖಂಡಿತವಾಗಿ, ನಿಶ್ಚಯವಾಗಿ.

**ध्वन्** (೧ನೇ ಗ. ಪ.) ಶಬ್ದ ಮಾಡು, ಒದರು.

## न.

**नक्र** (ಪು.) ಮೊಸಳೆ.

**नगेन्द्र** (ಪು.) ಪರ್ವತಶ್ರೇಷ್ಠ, ಹಿಮಾಲಯ.

**नद्** (೧ನೇ ಗ. ಪ.) ಗರ್ಜಿಸು, ಗದ್ದರಿಸು, ಶಬ್ದಮಾಡು.

**नन्द्** (**अभि** ಪೂರ್ವಕ) ಸತ್ಕರಿಸು. ಎದುರು ನೋಡು.

**नन्द** (ಪು.) ಒಂದು ರಾಜವಂಶ; ಆ ಮನೆತನದವನೊಬ್ಬನು.

**नम्र** (ವಿ.) ಬಡ, ವಿನಯವುಳ್ಳ.

**नरक** (ಪು.) ನರಕ, ನಿರಯ.

**नरेन्द्र** (ಪು.) ಅರಸು.

**नर्मदा** (ಸ್ತ್ರೀ.) ಒಂದು ನದಿ.

**नलतुल्याकृति** (ವಿ.) ನಲನಂಥ ಆಕಾರವುಳ್ಳ.

**नलरूपधारिन्** (ವಿ.) ನಲನ ರೂಪವನ್ನು ಧರಿಸಿದವ.

**नलिनी** (ಸ್ತ್ರೀ.) ಕಮಲಬಳ್ಳಿ.

**नवमी** (ಸ್ತ್ರೀ.) ಒಂದು ಪಕ್ಷದ ಒಂಭತ್ತನೇ ದಿವಸ.

**नवीन** (ವಿ.) ಹೊಸ, ನೂತನವಾದ.

**नश्** (**वि** ಪೂರ್ವಕ) ನಷ್ಟವಾಗು, ಸಾಯು.

**नश्वर** (ವಿ.) ನಷ್ಟವಾಗುವ, ಕ್ಷಣಭಂಗುರವಾದ.

**नस्** (ಸ್ತ್ರೀ.) ಮೂಗು.

**नह्** (೪ನೇ ಗ. ಉಭ. **सम्** ಪೂರ್ವಕ) ಸಿದ್ಧವಾಗು, ತಯಾರಾಗು.

**नाना** (ಅ.) ಬಗೆಬಗೆಯ, ತರತರದ, ಬಹಳ.

**नारद** (ಪು.) ಒಬ್ಬ ಋಷಿಯ ಹೆಸರು.

**नारायण** (ಪು.) ವಿಷ್ಣುವಿನ ಹೆಸರು.

**निःशान** (**निस्+शो** ೪ನೇ ಗ. ಆ. ವೈದಿಕ ಪ್ರ. ಧಾತು ವ. ಕೃ.) ಹದನ ಮಾಡುವ, ಮಸಿಯೋಣ.

**निःशुक्र** (ವಿ.) ಬಲಹೀನ, ಅಶಕ್ತ, ಸಾಮರ್ಥ್ಯವಿಲ್ಲದ.

**निःश्रेयस** (ನ.) ಮೋಕ್ಷ.

**निज्** (೩ನೇ ಗ. ಉಭ.) ಸ್ವಚ್ಛ ಮಾಡು, ಪಾವನ ಮಾಡು; **अव+निज्** ತೊಳೆ, ಒಗಿ.

**निज** (ವಿ.) ತನ್ನ (ಆಪ್ತರು).

**निञ्ज्** (೨ನೇ ಗ. ಆ. **प्र** ಪೂರ್ವಕ) ತೊಳೆ, ಒಗಿ.

**नितराम्** (ಅ.) ಅತಿಶಯವಾಗಿ.

**नित्य** (ವಿ.) ಶಾಶ್ವತವಾದ.

**नित्यकर्मन्** (ನ.) ದಿನಾಲು ಮಾಡತಕ್ಕ ಧರ್ಮಸಂಬಂಧದ ಕರ್ತವ್ಯ. ಆಹ್ನಿಕ.

**निदाघ** (ಪು.) ಬೇಸಿಗೆ.

**निधन** (ನ.) ಸಾವು, ನಾಶ.

**निनाद** (ಪು.) ಗದ್ದಲ, ಗೊಂದಲ, ಸದ್ದು.

**निन्दित** (**निन्द्** ಧಾತು ಭೂ. ಕೃ.) ದೂಷಿಸಲ್ಪಟ್ಟ, ಆಕ್ಷೇಪಣಕ್ಕೆ ಯೋಗ್ಯವಾದ.

**निपद्यमान** (**नि+पद्** ಧಾತು ವ. ಕೃ.) ಮಲಗುವ

**निबिड** (ವಿ.) ಘನವಾದ, ದಟ್ಟವಾದ.
**नियतम्** (ಅ.) ಖಂಡಿತವಾಗಿ, ನಿಶ್ಚಯವಾಗಿ.
**नियति** (ಸ್ತ್ರೀ.) ದೈವ, ಹಣೆಬರಹ.
**नियोक्तृ** (ಪು.) ಕೆಲಸಕ್ಕೆ ಹಚ್ಚುವವನ, ಕಟ್ಟುವವ.
**नियोगिन्** (ಪು.) ಕಾರ್ಯಕರ್ತ, ಪ್ರಧಾನಿ.
**निरर्थक** (ವಿ.) ನಿಷ್ಪ್ರಯೋಜಕ, ವ್ಯರ್ಥ.
**निरन्तरं** (ಅ.) ತೆರಪಿಲ್ಲದೆ, ಎಡೆಬಿಡದೆ.
**निरभिभवसार** (ವಿ.) ಉತ್ಕೃಷ್ಟವಾದ, ಆದರವುಳ್ಳ.
**निरय** (ಪು.) ನರಕ.
**निरस्त** (**निः+अस्** ಧಾತು. ಭೂ. ಕೃ.) ಪಸರಿಸಿದ, ಹರಹಿದ.
**निराहार** (ವಿ.) ಉಪವಾಸ, ಆಹಾರ ತಕ್ಕೊಳ್ಳದೆ ಇದ್ದ.
**निर्घृणता** (ಸ್ತ್ರೀ.) ನಿಷ್ಠುರತ್ವ, ದುಷ್ಟತನ.
**निर्जन** (ವಿ.) ಉಲುಹಿಲ್ಲದ, ಒಕ್ಕಲಿಲ್ಲದ.
**निर्दय** (ವಿ.) ನಿಷ್ಠುರ, ಕ್ರೂರ.
**निर्जर** (ಪು.) ದೇವತೆ.
**निर्दश** (ವಿ.) ಹತ್ತು ದಿವಸದ (ಕೂಸು).
**निर्धन** (ವಿ.) ದುಡ್ಡಿಲ್ಲದ, ಬಡ.
**निर्भर** (ವಿ.) ತುಂಬಿದ, ಪೂರ್ಣವಾದ.
**निर्व्याजता** (ಸ್ತ್ರೀ.) ನಿಜಸ್ತಿಕೆ, ಖರೇತನ.
**निवर्तन** (ನ.) ಮಾಡದೆ ಇರೋಣ, ಮನಸು ತಿರುಗಿಸೋಣ.
**निश्** (ಸ್ತ್ರೀ.) ರಾತ್ರಿ.
**निषधेश्वर** (ಪು.) ನಿಷಧ ದೇಶದ ಅರಸು, ನಳರಾಯನು.
**निष्ठाशून्य** (ವಿ.) [**निष्ठा** ಭಾವ, ಭಕ್ತಿ; **शून्य** (ವಿ.) ಇಲ್ಲದ] ಭಕ್ತಿ ಇಲ್ಲದ.
**निष्फलता** (ಸ್ತ್ರೀ.) ನಿಷ್ಪ್ರಯೋಜಕತ್ವ.
**निसर्ग** (ಪು.) ಸ್ವಭಾವ.
**नी** ಒಯ್ಯು; **उप+नी** ಮುಂಜೀ ಮಾಡು.
**नीच** (ವಿ.) ಕೀಳ, ದುರಾತ್ಮ, ಕಂಗಾಲ, ತಗ್ಗಿನಲ್ಲಿರುವ.
**नीचग** (ವಿ.) ಕಂಗಾಲಿನನ್ನು ಆಶ್ರಯಿಸುವ, ದುರಾತ್ಮನಿಗೆ ಅಧೀನವಾದ; ತಗ್ಗು ಭೂಮಿಗೆ ಹರಿಯುವ.
**नीचैः** (ಅ.) ಕೆಳಗೆ.
**नीतिनिपुण** (ವಿ.) [**नीति** (ಸ್ತ್ರೀ.) ರಾಜಕಾರಣಶಾಸ್ತ್ರ, ಒಳ್ಳೇ ನಡತೆ; **निपुण** (ವಿ.) ಕುಶಲ] ರಾಜ್ಯವ್ಯವಹಾರಶಾಸ್ತ್ರದಲ್ಲಿ ನಿಪುಣವಾದ. ತಿಳುವಳಿಕೆಯುಳ್ಳ.
**नु** (೨ನೇ ಗ. ಪ.) ಹೊಗಳು, ಸ್ತುತಿಸು.
**नु** (ಅ.) ಅವಧಾರಣಾರ್ಥಕ ನಿಪಾತ.
**नूनम्** (ಅ.) ನಿಃಸಂಶಯವಾಗಿ, ನಿಶ್ಚಯವಾಗಿ.
**नूपुर** (ಪು.) ಪೈಂಜಣ, ಕಾಲಕಡಗ.
**नृषद्वर** (ವಿ.) ಒಂದು ಸ್ಥಳಕ್ಕೆ ಅಂಟಿಕೊಂಡಿರುವ, ಜನರಲ್ಲಿ ವಾಸಿಸುವ.
**नेमि** (ಸ್ತ್ರೀ.) ಗಾಲಿಯ ಸುತ್ತಳತೆ.
**नैपुण्य** (ನ.) ಕೌಶಲ್ಯ, ಚಾತುರ್ಯ.
**नैषध** (ಪು.) ನಿಷಧ ದೇಶದ ಅರಸು, ನಲ.
**न्यायप्रवृत्त** (ವಿ.) [**न्याय** (ಪು.) ನೀತಿ, ಪ್ರಮಾಣಿಕತನ; **प्रवृत्त—प्रवृत्** ಧಾತು ಭೂ. ಕೃ.] ನೀತಿಗೆ ಅನುಸರಿಸಿ ನಡೆಯುವವ.
**न्यायवादिन्** (ವಿ.) ನ್ಯಾಯವಾದದ್ದನ್ನೇ ಆಡುವ.
**न्याय्य** (ವಿ.) ಯಥಾರ್ಥವಾದ, ನೀತಿಗೆ ಸರಿಯಾದ.

## प.

**पङ्क्ति** (ಸ್ತ್ರೀ.) ಓಳಿ, ಸಾಲು.
**पञ्च** (ಸಂಖ್ಯಾವಾಚಕ) ಐದು.
**पठ्** (೧ನೇ ಗ. ಪ.) ಅನ್ನು, ಓದು.
**पठ्यमान** (**पठ्** ಧಾತು ವ. ಕೃ.) ಓದಲ್ಪಡುವ, ಅನ್ನಲ್ಪಡುವ.
**पण्** (೧ನೇ ಗ. ಪ.) ಹೊಗಳು, ಸ್ತುತಿಸು, ಜೂಜಾಡು, ಜಿದ್ದು ಕಟ್ಟು.
**पत्** (**अभि** ಪೂರ್ವಕ) ಕಡೆಗೆ ಹಾರು; **प्र** ಮತ್ತು **उत्+पत्** ಹಾರು; ಅದರಲ್ಲಿ ಹಾರು.
**पतङ्गवत्** (ಅ.) ಪತಂಗದಂತೆ.
**पतञ्जलि** (ಪು.) ಮಹಾಭಾಷ್ಯವೆಂಬ ವ್ಯಾಕರಣದ ಕರ್ತನು.

**पतन** (ನ.) ಬೀಳೋಣ, ಭ್ರಷ್ಟವಾಗೋಣ, ನಾಶ.

**पति** (ಪು.) ಯಜಮಾನ, ಗಂಡ.

**पतित** (ವಿ.) ಪಾಪಿ, ಭ್ರಷ್ಟ, ಕುಲಗೆಟ್ಟ.

**पथः** (**पथिन्** ಶಬ್ದದ ಪಂಚಮೀ) ಹಾದಿಯಿಂದ.

**पथिन्** (ಪು.) ದಾರಿ, ಹಾದಿ, ಮಾರ್ಗ.

**पथ्य** (ನ.) ಹಿತಕರವಾದಂಥಾದ್ದು.

**पद्** (೪ನೇ ಗ. ಆ.) ಬೀಳು, ಉದುರು.

**प्रति + पद्** ಅರಿ, ತಿಳಿ. ಸ್ವೀಕರಿಸು, ಮಾಡು, ಆಚರಿಸು, ಪಡಿ; **सम् + पद्** ಆಗು, ಸಂಭವಿಸು; **प्रति + पद्** (ಪ್ರೇರಣಾರ್ಥಕ) ಆಲೋಚಿಸು, ವಿವರಿಸು, ಸಿದ್ಧ ಮಾಡು, ಕೊಡು, ಒಪ್ಪಿಸು; **सम् + पद्** (ಪ್ರೇರಣಾರ್ಥಕ) ಗೊತ್ತು ಮಾಡು, ತೀರಿಸು, ವ್ಯಾಪಾರ ಮುಗಿಸು ಅಥವಾ ಬಗೆಹರಿಸು.

**पद्** (ಪು.) ಅಡಿ.

**पद** (ನ.) ಹೆಜ್ಜೆ.

**पदवी** (ಸ್ತ್ರೀ.) ಹಾದಿ, ಮಾರ್ಗ.

**पदार्थ** (ಪು.) ವಸ್ತು, ಒಡವೆ.

**पद्धति** (ಸ್ತ್ರೀ.) ಶಿಸ್ತು, ಸಾರಣೆ, ಕ್ರಮ.

**पद्म** (ನ.) ಹಗಲು ಅರಳುವ ಕಮಲ.

**पन्** (೧ನೇ ಗ. ಪ.) ಹೊಗಳು, ಸ್ತುತಿಸು.

**पपी** (ಪು.) ಸೂರ್ಯ, ರಕ್ಷಿಸುವವ.

**पर** (ಸ.) ಎರಡನೆಯುವ, (ವಿ.) ಎರಡನೆಯುವನ.

**पर** (ಪು. ನ.) ಉತ್ಕೃಷ್ಟವಾದ ಒಡವೆ, ಈಶ್ವರ.

**परंपरा** (ಸ್ತ್ರೀ.) ಸಾಲು, ಪಂಕ್ತಿ.

**परम्** (ಅ.) ಆದರೆ.

**परमेश्वर** (ಪು.) ಯಾವತ್ತು ಚರಾಚರದ ಒಡೆಯು, ಈಶ್ವರ.

**परमेष्ठिन्** (ಪು.) ಬ್ರಹ್ಮ.

**परायण** (ನ.) ಭಕ್ತಿಯ ಮೂಲ ಹೇತು.

**परार्थघटक** (ವಿ.) ತನ್ನ ಹೊರ್ತು ಉಳಿದವರ ಕಲ್ಯಾಣ ಮಾಡುವವ.

**परासु** (ವಿ.) ಸತ್ತ.

**परिक्षित्** (ಪು.) **अभिमन्यु**ವಿನ ಮಗ, **अर्जुन**ನ ಮೊಮ್ಮಗ.

**परिचर्या** (ಪು.) ಸೇವೆ, ಆದರ, ಪೂಜೆ.

**परिचारक** (ಪು.) ಸೇವಕ, ಜೊತೆಗಾರ.

**परिजन** (ಪು.) ಸೇವಕ.

**परिणत** (ವಿ.) ಮುಪ್ಪಿನ, ವಯಸ್ಸಾದ.

**परित्यक्त** (**परित्यज्** ಧಾತು ಭೂ. ಕೃ.) ಬಿಟ್ಟ.

**परित्याज्य** (ವಿ.) ಬಿಡತಕ್ಕ.

**परिपन्थिन्** (ವಿ.) ಅಡ್ಡಬರುವವ, ವಿಘ್ನ ಮಾಡುವವ; **तत्परिपन्थिनी** (ಸ್ತ್ರೀ.) ವಿಘ್ನ ತರುವವಳು.

**परिपाक** (ಪು.) ಪಕ್ವದೆಶೆ.

**परिप्लुष्ट** (**परिप्लुष्** ಧಾತು ಭೂ. ಕೃ.) ಸುಟ್ಟ.

**परिभ्रष्ट** (**परि + भ्रंश** ಧಾತು ಭೂ. ಕೃ.) ಹೀನವಾದ, ಕೆಟ್ಟ.

**परिवर्तन** (ನ.) ಬದಲು, ತಿರುಗುವಿಕೆ.

**परिवर्तिन्** (ವಿ.) ತಿರುಗುವ.

**परिवार** (ಪು.) ಪರಿಜನ.

**परिवृढ** (ಪು.) ಯಜಮಾನ, ಒಡೆಯು.

**परिवेष्टृ** (ಪು.) ಬಡಿಸುವವ.

**परिव्राज्** (ಪು.) ಬೈರಾಗಿ, ಸನ್ಯಾಸಿ.

**परिष्वङ्ग** (ಪು.) ಆಲಿಂಗನ.

**परिसमाप्ति** (ಸ್ತ್ರೀ.) ಅಂತ, ಸಿದ್ಧಿ.

**परिताप** (ಪು.) ದುಃಖ, ಸಂಕಟ.

**परोपकार** (ಪು.) ಪರಹಿತದ ಕೆಲಸ.

**पर्जन्य** (ಪು.) ಮಳೆ.

**पर्यग्निकृत** (ವಿ.) ಯಾವ ವಸ್ತುವಿನ ಸುತ್ತ ಬೆಂಕಿ ಒಯ್ಯಲ್ಪಡುತ್ತದೋ ಆ ವಸ್ತು; ಬಲಿ ಕೊಡತಕ್ಕ ಪ್ರಾಣಿಯ ಸುತ್ತ ಬೆಂಕಿಯನ್ನು ಒಯ್ಯುವ ಸಂಪ್ರದಾಯವುಂಟು.

**पर्याप्तम्** (ಅ.) ಪೂರ್ಣವಾಗಿ, ಮನಸಿಗೆ ಸೊಗಸಾಗುವಂತೆ.

**पर्वत** (ಪು.) ಬೆಟ್ಟ; ಒಬ್ಬ ಋಷಿಯ ಹೆಸರು.

**पलायमान** (**परा** ಅಥವಾ **पला+अय्** ೧ನೇ ಗ. ಆ. ಧಾತು ವ. ಕೃ.) ಓಡುವ, ಹೋಗುವ.

**पलाश** (ಪು.) ಮುತ್ತಲಗಿಡ.

पल्लव (ಪು. ನ.) ಎಳೆ ಎಲೆ.
पा (೨ನೇ ಗ. ಪ.) ರಕ್ಷಿಸು.
पात (ಪು.) ಬೀಳೋಣ.
पातित (पत् ಧಾತು ಪ್ರೇರಣಾರ್ಥಕದ ಭೂ. ಕೃ.) ಕೆಡಹಿದ.
पात्र (ನ.) (ಧರ್ಮಕ್ಕೆ) ಯೋಗ್ಯವಸ್ತು, (ದಾನಕ್ಕೆ) ತಕ್ಕವನು.
पान्थ (ಪು.) ಹಾದಿಕಾರ.
पापकृत् (ವಿ.) ಪಾಪ ಮಾಡಿದವ.
पापहर (ವಿ.) ಪಾಪ ದೂರ ಮಾಡುವವ.
पारयिष्णुतम (ವಿ.) ಯಾವದೊಂದು ಕಾರ್ಯ ಸಿದ್ಧಿಗೆ ಬಹು ಪ್ರಯೋಜನಕರವಾದ.
पारिक्षित (ಪು.) ಪರಿಕ್ಷಿತನ ಮಗ.
पार्थ (ಪು.) ಪೃಥೆಯ ಮಗ, ಪಾಂಡವ.
पावक (ಪು.) ಬೆಂಕಿ.
पावन (ವಿ.) ಪವಿತ್ರ ಮಾಡುವ, ಪವಿತ್ರವಾದ.
पाश (ಪು.) ಬಲಿ.
पिञ्जर (ಪು. ನ.) ಕುಂಕುಮ, ಕುಂಕುಮ ಬಣ್ಣದ ಪುಡಿ.
पिण्डद (ವಿ.) ಅನ್ನ ಹಾಕುವವ.
पिण्डालक्तक (ಪು.) ಕೆಂಪು ಬಣ್ಣ.
पिनाकिन् (ಪು.) ಶಿವ, ಮಹಾದೇವ.
पिशुन (ವಿ.) ದುರುಳ, ದುರಾತ್ಮ, ಚಾಡಿ ಹೇಳುವವ.
पिशुनता (ಸ್ತ್ರೀ.) ಹೊಟ್ಟೇಕಿಚ್ಚು.
पिश् (೬ನೇ ಗ. ಪ.) ಬೀಸು, ಜಜ್ಜು.
पीडाकर (ವಿ.) ದುಃಖ ಕೊಡುವ, ಪೀಡಿಸುವ.
पीयूष (ನ.) ಅಮೃತ.
पुंस् (ಪು.) ಮನುಷ್ಯ.
पुण्डरीक (ಪು.) ಒಬ್ಬ ಮನುಷ್ಯನ ಹೆಸರು; ಕಮಲ.
पुण्यकृत् (ವಿ.) ಪುಣ್ಯ ಮಾಡುವ.
पुण्यपुरुष (ಪು.) ಸತ್ಪುರುಷ, ಒಳ್ಳೇ ಮನುಷ್ಯ.
पुनरुक्तभूत (ವಿ.) ತಿರುಗಿ ನುಡಿದ.
पुनर्भू (ಸ್ತ್ರೀ.) ಎರಡನೇ ಸಾರಿ ಮದುವೆಯಾದ ಹೆಂಗಸು.
पुर् (ಸ್ತ್ರೀ.) ಪಟ್ಟಣ.
पुरंधि (ಸ್ತ್ರೀ.) ಒಂದು ದೇವತೆ.
पुरद्वार (ನ.) ಊರ ಅಗಸೆಬಾಗಿಲು.
पुरस्तात् (ಅ.) ಎದುರಿಗೆ, ಮುಂದೆ.
पुरोधस् (ಪು.) ಪುರೋಹಿತ.
पुरोहित (ಪು.) ಪುರೋಹಿತ.
पुष् (೯ನೇ. ಗ. ಪ.) ಪೋಷಿಸು, ಸಾಕು, ಬೆಳಿಸು.
पुष्कर (ಪು.) ಒಬ್ಬ ಮನುಷ್ಯನ ಹೆಸರು.
पुष्टि (ಸ್ತ್ರೀ.) ಪೋಷಣೆ.
पुष्पमित्र (ಪು.) ಒಬ್ಬ ಅರಸು.
पुष्पस्रज् (ಸ್ತ್ರೀ.) ಹೂವಿನ ಮಾಲೆ.
पुष्पिपर्णी (ಸ್ತ್ರೀ.) ಹೂವುಳ್ಳ ಬಳ್ಳಿ, ಫಲವತ್ತಾದ ಬಳ್ಳಿ.
पू (೧ನೇ ಗ. ಉಭ.) ಪಾವನ ಮಾಡು, ಸ್ವಚ್ಛ ಮಾಡು.
पूर्ण (पॄ ಧಾತುವಿನ ಭೂ. ಕೃ.) ತುಂಬಿದ.
पूर्णपात्र (ನ.) ಉತ್ಸವದ ಸಮಯದಲ್ಲಿ ಸೇವಕರಿಗೂ ಪರಿಚಾರಕರಿಗೂ ಕೊಟ್ಟ ಉಡುಗರೆ.
पूर्व (ವಿ. ಸ.) ಮೊದಲಿನ, ಮೂಡಣದ.
पूर्वरात्र (ಪು.) [पूर्व ಮೊದಲಿನ, रात्रि (ಸ್ತ್ರೀ.) ಇರುಳು] ರಾತ್ರಿಯ ಪೂರ್ವಭಾಗ.
पूर्वाह्ण (ಪು.) ದಿವಸದ ಪೂರ್ವಭಾಗ.
पृ ಅಥವಾ पॄ (೩ನೇ ಗ. ಪ.) ತುಂಬು.
पृच् (೧ನೇ ಗ., ೭ನೇ ಗ. ಪ., ೨ನೇ ಗ. ಆ., ೧೦ನೇ ಗ. सम् ಪೂರ್ವಕ) ಕೂಡು, ತಗಲು, ಸಂಯೋಗವಾಗು, ಸಂಗತಿ ಮಾಡು.
पृत् (ಸ್ತ್ರೀ.) ದಂಡು.
पृथग्जन (ಪು.) ನೀಚ, ದುರುಳ, ಕೀಳ, ಮನುಷ್ಯ.
पृथु (ವಿ.) ದೊಡ್ಡ.
पॄ (೯ನೇ ಗ. ಪ.) ತುಂಬು.
पौराणिक (ಪು.) ಪುರಾಣ ಹೇಳುವವ.
पौरुष (ನ.) ಕಲಿತನ, ಪರಾಕ್ರಮ.
पौर्णमासी (ಸ್ತ್ರೀ.) ಹುಣ್ಣಿವೆ.

**प्रकृति** (ಸ್ತ್ರೀ.) ಪ್ರಜೆಗಳು, ಪ್ರಧಾನಿಗಳು; ಸ್ವಭಾವ.

**प्रकृष्ट** (ವಿ.) ವೈಭವವುಳ್ಳ, ಭವ್ಯವಾದ, ದೊಡ್ಡ.

**प्रचण्ड** (ವಿ.) ಉಗ್ರ, ಭಯಂಕರ.

**प्रचार** (ಪು.) ರೂಢಿ.

**प्रच्युत** (प्र+च्यु ಧಾತು ಭೂ. ಕೃ.) ಭ್ರಷ್ಟವಾದ.

**प्रजापति** (ಪು.) ಬ್ರಹ್ಮನು.

**प्रजापशुकाम** [**प्रजा** (ಸ್ತ್ರೀ.) ಸಂತತಿ; **पशु** (ಪು.) ದನ; **काम** (ಪು.) ಇಚ್ಛೆ] ಸಂತತಿಯನ್ನೂ ದನಗಳನ್ನೂ ಬಯಸುವವನು.

**प्रजापीडनज** (ವಿ.) ಪ್ರಜೆಗಳನ್ನು ಪೀಡಿಸುವದರಿಂದ ಹುಟ್ಟುವ.

**प्रणिहित** (प्र+नि+धा ಧಾತು ಭೂ. ಕೃ.) ಇಟ್ಟ; **सम्यक्प्रणिहित** ಅಂಕೆಯಲ್ಲಿಟ್ಟ, ಸುವ್ಯವಸ್ಥಿತ, ಒಳ್ಳೇ ಮನಸ್ಸುಳ್ಳ.

**प्रतापनिधि** (ಪು.) [**प्रताप** (ಪು.) ಬಿಸಲು, ಉಷ್ಣತೆ] ಉಷ್ಣತೆಯ ಖಜಾನೆ.

**प्रतिकार, प्रतीकार** (ಪು.) ಕೆಡಕಿನ ನಿವಾರಣೆ, ಉಪಾಯ.

**प्रतिनिविष्ट** (ವಿ.) ಛಲವಾದಿ, ಹಟಮಾರಿ, ತುಂಟ.

**प्रतिपक्ष** (ಪು.) ಶತ್ರು, ಹಗೆ.

**प्रतिबिम्ब** (ನ.) ಪಡಿನೆಳಲು, ಪ್ರತಿಚ್ಛಾಯಾ.

**प्रतिषिद्ध** (प्रति+सिध् ಧಾತು ಭೂ. ಕೃ.) ಮಾಡಲಾಗದೆಂದು ಹೇಳಲ್ಪಟ್ಟ, ನಿಷೇಧಿಸಿದ.

**प्रतिहारी** (ಸ್ತ್ರೀ.) ಬಾಗಿಲ ಕಾಯುವ ಹೆಂಗಸು.

**प्रत्यग्र** (ವಿ.) ತಾಜಾ, ಹೊಸ.

**प्रत्यञ्च्** (ವಿ.) ಪಡುವಣದ.

**प्रत्यहम्** (ಅ.) ಪ್ರತಿ ದಿವಸ.

**प्रत्युज्जीवन** (ನ.) ಪುನಃ ಜೀವಿಸುವದು, ತಿರುಗಿ ಜೀವಿಸುವದು.

**प्रत्युत्पन्नमति** (ವಿ.) ಕುಶಾಗ್ರಬುದ್ಧಿ, ಚುರುಕು ಬುದ್ಧಿಯುಳ್ಳ.

**प्रत्यूष** (ಪು.) ನಸುಕು, ಅರುಣೋದಯ.

**प्रदीप्त** (प्र+दीप् ಧಾತು ಭೂ. ಕೃ.) ತಳತಳ ಹೊಳೆಯುವ, ಮಿಂಚುವ.

**प्रदेश** (ಪು.) ಪ್ರಾಂತ.

**प्रद्युम्न** (ಪು.) ಕಾಮ.

**प्रधी** (ವಿ.) ಬುದ್ಧಿವಂತ, ಜಾಣ, ಚುರುಕು ಬುದ್ಧಿಯುವ.

**प्रपन्न** (ವಿ.) [प्र+पद् (ಧಾತು ಭೂ. ಕೃ.] ಶರಣಾದ, ಪಾದಕ್ಕೆ ಎರಗಿದ.

**प्रभविन्** (ಪು.) ಬಲವುಳ್ಳ ಅರಸು.

**प्रभात** (ನ.) ನಸುಕು.

**प्रभाव** (ಪು.) ವೈಭವ, ದೊಡ್ಡಸ್ತಿಕೆ, ಪರಾಕ್ರಮ.

**प्रमति** (ಪು.) ಒಬ್ಬ ಮನುಷ್ಯನ ಹೆಸರು.

**प्रमद्वरा** (ಸ್ತ್ರೀ.) ಒಬ್ಬ ಸ್ತ್ರೀಯ ಹೆಸರು.

**प्रमाद** (ಪು.) ತಪ್ಪು, ಅಜಾಗ್ರತೆ.

**प्रयाण** (ನ.) ಹೊರಡುವದು, ಹೋಗುವದು.

**प्रयुक्त** (प्र+युज् ಧಾತು ಭೂ. ಕೃ.) ಉಪಯೋಗಿಸಿದ, ಮಾಡಿದ.

**प्रवासिन्** (ಪು.) ಪಾಂಥಸ್ಥ, ಪ್ರವಾಸ ಮಾಡುವವ, ಹಾದಿಕಾರ.

**प्रवृत्त्युपलब्धि** (ಸ್ತ್ರೀ.) ಸುದ್ದೀ ತಿಳುಕೊಳ್ಳೋಣ.

**प्रव्रजित** (प्र+व्रज् ಧಾತು ಭೂ. ಕೃ.) ಹೊರಗೆ ಹಾಕಲ್ಪಟ್ಟ, ಸನ್ಯಾಸಿಯಾದ.

**प्रसन्न** (प्र+सद् ಧಾತು ಭೂ. ಕೃ.) ತುಷ್ಟವಾದ, ಅನುಕೂಲವಾದ.

**प्रसव** (ಪು.) ಹುಟ್ಟುವಳಿ, ಫಲ.

**प्रागल्भ्य** (ನ.) ಧಿಟ್ಟತನ.

**प्राच्** (ವಿ.) ಪೂರ್ವದ.

**प्राण** (ಪು. ನಿತ್ಯ ಬಹುವಚನಾಂತ) ಜೀವ.

**प्राणाघात** (ಪು.) ಜೀವಹಿಂಸೆ, ಕೊಲೆ.

**प्रादुस्** (ಅ.) ಪ್ರಕಟ, ಸ್ಪಷ್ಟ.

**प्रान्त** (ಪು.) ಮೇರೆ, ಸೀಮೆ.

**प्रापितवत्** (प्र+आप् ಧಾತು ಪ್ರೇರಣಾರ್ಥಕದ ಭೂ. ಕೃ. ಕರ್ತ್ರರ್ಥಕ) ದೊರಕಿಸಿದ, ಕೊಟ್ಟ.

**प्राप्तकाल** (ವಿ.) ಕಾಲಕ್ಕೆ ಸರಿಯಾದ, ಯಾವ ದರ ಸಮಯುವು ಒದಗಿರುವದೋ ಆ ವಸ್ತು.

**प्रायस्** (ಅ.) ಬಹುಶಃ, ಬಹುತರವಾಗಿ.

**प्रार्थना** (ಸ್ತ್ರೀ.) ವಿಜ್ಞಾಪನೆ, ಬಿನ್ನಹ.

**प्रियदर्शन** (ವಿ.) ಯಾವನನ್ನು ನೋಡಿದರೆ ಸಮಾಧಾನವಾಗುವದೋ ಅಂಥವನು.

**प्रियशर्मन्** (ಪು.) ಒಬ್ಬ ಬ್ರಾಹ್ಮಣನ ಹೆಸರು.

**प्रियसंवास** (ಪು.) [**संवास** (ಪು.) ಇರುವಿಕೆ, ಕೂಡಿಕೊಂಡು ಇರುವದು] ಸ್ನೇಹಿತರನ್ನು ಕೂಡಿಕೊಂಡು ಇರುವದು.

**प्री** (೯ನೇ ಗ. ಉಭ.) ಪ್ರೀತಿ ಮಾಡು, ಸಂತೈಸು.

**प्रीत** (**प्री** ಧಾತು ಭೂ. ಕೃ.) ಸಂತೈಸಿದ, ಸಂತೋಷ ಪಟ್ಟ.

**प्लवंगम** (ಪು.) ಮಂಗ.

**प्लुष्** (೧ನೇ ಗ., ೯ನೇ ಗ. ಪ.) ಸುಡು.

**प्सा** (೨ನೇ ಗ. ಪ.) ತಿನ್ನು, ಹರಿದು ತಿನ್ನು.

## फ.

**फण्** (೧ನೇ ಗ. ಪ.) ಹೋಗು.

**फल्** (೧ನೇ ಗ. ಪ.) ಫಲಿಸು, ಸಿದ್ಧವಾಗು.

**फलग्राहि** (ವಿ.) ಫಲ ಭೋಗಿಸುವವ.

**फलमूलादि** (ವಿ.) ಕಾಯಿಗಡ್ಡೆಗಳು.

**फूत्कार** (ಪು.) ಉಸುರುಗರೆಯುವದು.

## ब

**बटु** (ಪು.) ಹುಡುಗ.

**बत** (ಅ.) ಖೇದಾಶ್ಚರ್ಯದರ್ಶಕಾವ್ಯಯು.

**बन्ध्** (೯ನೇ ಗ. ಪ.) ಕಟ್ಟು, ಬಿಗಿ.

**बन्धन** (ನ.) ಕಟ್ಟುವಿಕೆ, ಸೆರೆಯಲ್ಲಿ ಇರಿಸೋಣ.

**बल** (ನ.) ದಂಡು.

**बहिरुपाधि** (ಪು.) [**उपाधि** (ಪು.) ಗುಣ, ಲಕ್ಷಣ, ಅಪೇಕ್ಷನ] ತೋರಿಕೆಯ ಗುಣ ಅಥವಾ ಲಕ್ಷಣ.

**बहिस्** (ಅ.) ಹೊರಗೆ.

**बहु** (ವಿ.) ಬಹಳ; (ಅ.) ಬಹಳವಾಗಿ

**बहुविध** (ವಿ.) ಬಗೆಬಗೆಯು.

**बाणजाल** (ನ.) [**जाल** (ನ.) ಸಮೂಹ] ಕಣೆಗಳ ಸಮೂಹ.

**बाणपथ** (ಪು.) ಕಣೆಗಳ ಮಾರ್ಗ, ಬಾಣಗಳು ಹೋಗುವಷ್ಟು ದೂರ.

**बाणवृष्टि** (ಸ್ತ್ರೀ.) ಕಣೆಗಳ ಮಳೆ.

**बालातप** (ಪು.) ಎಳೆ ಬಿಸಿಲು.

**बालिका** (ಸ್ತ್ರೀ.) ಹುಡುಗಿ.

**बाष्प** (ಪು. ನ.) ಕಂಬನಿ.

**बाहुक** (ಪು.) ಸಾರಥಿಯ ರೂಪವನ್ನು ಧರಿಸಿದ ನಳನ ಹೆಸರು.

**बिभीषण** (ಪು.) ರಾವಣನ ತಮ್ಮನೂ ರಾಮಚಂದ್ರನ ಸಖನೂ ಆದ ರಾಕ್ಷಸನು.

**बुद्धिलक्षण** (ನ.) ಜಾಣತನದ ಕುರುಹು.

**बुभुक्षित** (ವಿ.) ಹಸಿದ.

**बृहद्रथ** (ಪು.) ಮಗಧ ದೇಶದ ಅರಸು, ಜರಾಸಂಧನ ತಂದೆ.

**बोध** (ಪು.) ಜ್ಞಾನ, ಎಚ್ಚರಿಕೆ.

**ब्रह्मन्** (ನ.) ವಿಶ್ವದ ಆದಿಕಾರಣ; (ಪು.) ಯಜ್ಞದಲ್ಲಿ ಯಾವತ್ತು ಕೆಲಸಗಳು ಸರಿಯಾಗಿ ಸಾಗುತ್ತವೋ ಇಲ್ಲೋ ಎಂಬುದನ್ನು ವಿಚಾರಿಸುವ ಅಧಿಕಾರವುಳ್ಳ ಬ್ರಾಹ್ಮಣನು.

**ब्रह्मवर्चस्विन्** (ವಿ.) ವೇದಾಧ್ಯಯನದಿಂದ ತೇಜಸ್ಸುಳ್ಳವ.

**ब्रह्मादि** (ಪು.) ಬ್ರಹ್ಮನು ಮೊದಲಾದ (ದೇವತೆಗಳು).

**ब्राह्म** (ಪು.) ಲಗ್ನದ ಒಂದು ವಿಧಿ, ಬ್ರಾಹ್ಮಣರಲ್ಲಿ ಬಹುತರ ಈ ವಿಧಿಯಿಂದ ಲಗ್ನಗಳಾಗುತ್ತವೆ.

**ब्रू** (೨ನೇ ಗ. ಉಭ.) ಮಾತಾಡು.

## भ.

**भक्तिमार्ग** (ಪು.) ಈಶ್ವರನಲ್ಲಿ ಭಕ್ತಿಯಿಟ್ಟು ಸಾಯುಜ್ಯ ಸುಖವನ್ನು ಪಡಿಯುವ ಮಾರ್ಗ.

**भग** (ಪು.) ಒಂದು ದೇವತೆ, ದೈವ, ಉತ್ಕರ್ಷ.

**भग्न** (**भञ्ज्** ಧಾತು ಭೂ. ಕೃ.) ಹಾಳಾದ, ಮುರಿದು ಬಿದ್ದ, ಮುರಿದ, ಒಡಿ ಹೋದ.

**भज्** (೧ನೇ ಗ. ಉಭ.) ಆಶ್ರಯಿಸು, ತಕ್ಕೊ; **वि+भज्** ಹಂಚು; **सम्+वि+भज्** ಪಾಲು ಕೊಡು.

**भञ्ज्** (೭ನೇಗ.ಪ.) ಮುರಿ, ಹರಿ, ನಾಶಮಾಡು.

**भट** (ಪು.) ಬಂಟ.

**भण्** (೧ನೇ ಗ. ಪ.) ಅನ್ನು, ಮಾತಾಡು.

**भयाक्रान्त** (ವಿ.) ಗಾಬರಿಯಾದ, ಅಂಜಿದ.

**भव** (ಪು.) ಲೋಕ, ಜಗತ್ತು, ಸಂಸಾರ.

**भवन** (ನ.) ಮನೆ.

**भवितव्यता** (ಸ್ತ್ರೀ.) ದೈವ, ಹಣೆಬರಹ.

**भा** (೨ನೇ ಗ. ಪ.) ತೋರು, ಹೊಳೆಯು.

**भाग** (ಪು.) ಪಾಲು, ಅಂಶ.

**भागधेय** (ನ.) ದೈವ, ಅದೃಷ್ಟ.

**भाग्ययोग** (ಪು.) [**भाग्य** (ನ.) ದೈವ; **योग** (ಪು.) ಅನುಕೂಲತೆ] ದೈವಾನುಕೂಲತೆ.

**भाज्** (೧೦ನೇ ಗ.) **सम्+वि+भाज्** ಪಾಲು ಕೊಡು, ಕೊಡು.

**भानु** (ಪು.) ಸೂರ್ಯ.

**भानुमती** (ಸ್ತ್ರೀ.) ದುರ್ಯೋಧನನ ಹೆಂಡತಿ.

**भार्गव** (ಪು.) ಒಬ್ಬ ಋಷಿಯ ಹೆಸರು.

**भाव** (ಪು.) ಪದಾರ್ಥ, ವಸ್ತು.

**भाष्** (೧ನೇ ಗ. ಆ. **प्रति** ಪೂರ್ವಕ) ಉತ್ತರ ಕೊಡು.

**भाष्यकृत्** (ಪು.) ಟೀಕೆ ಅಥವಾ ಭಾಷ್ಯವನ್ನು ಬರೆದವ.

**भास्कर** (ಪು.) ಸೂರ್ಯ.

**भित्ति** (ಸ್ತ್ರೀ.) ಗೋಡೆ.

**भिद्** (೭ನೇ ಗ. ಉಭ.) ಸೀಳು, ಒಡೆ.

**भिन्न** (ವಿ.) ಬೇರೆ ಬೇರೆ.

**भी** (೩ನೇ ಗ. ಪ.) ಅಂಜು, ಭಯಪಡು.

**भीषण** (ವಿ.) ಭಯಂಕರವಾದ.

**भुक्ति** (ಸ್ತ್ರೀ.) ಭೋಗ, ಉಪಭೋಗ.

**भुज्** (೬ನೇ ಗ. ಪ.) ಅನುಭವಿಸು, ಉಪಭೋಗಿಸು; (೭ನೇ ಗ. ಆ.) ತಿನ್ನು, ಉಣ್ಣು.

**भुजंगम, भुजग** (ಪು.) ನಾಗರಹಾವು. ಹಾವು.

**भू** (ಸ್ತ್ರೀ.) ಪೃಥ್ವಿ, ಭೂಮಿ.

**भू**—**अभि+भू** ಸೋಲಿಸು; **परि+भू** ಹಳಿ, ಜರಿ.

**भूतसमागम** (ಪು.) ಪ್ರಾಣಿಗಳು ಒತ್ತಟ್ಟಿಗೆ ಕೂಡುವದು, ಕೂಟ.

**भूरि** (ವಿ.) ಬಹಳ.

**भूष्णु** (ವಿ.) ಆಗುವ.

**भृ** (೩ನೇ ಗ. ಉಭ.) ವಹಿಸು, ರಕ್ಷಿಸು, ತಾಳು.

**भृश** (ವಿ.) ಬಹಳ, ದೊಡ್ಡ, ಬಲವುಳ್ಳ.

**भेक** (ಪು.) ಕಪ್ಪೆ.

**भोगकरी** (ಸ್ತ್ರೀ.) ಸುಖ ಪಡಿಸುವ. ಸಮಾಧಾನಗೊಳಿಸುವ.

**भोगतृष्णा** (ಸ್ತ್ರೀ.) ವಿಷಯವಾಸನೆ.

**भ्रंश्** (೧ನೇ ಗ. ಆ., ೪ನೇ ಗ. ಪ.) ಬೀಳು.

**भ्रम्** (೧ನೇ, ೪ನೇ ಗ. ಪ.) ತಿರುಗು, ಪ್ರದಕ್ಷಿಣೆ ಮಾಡು.

**भ्रस्ज्** (೬ನೇ ಗ. ಉಭ.) ಸುಡು, ಹುರಿ.

**भ्राज्** (೧ನೇ ಗ. ಆ.) ಹೊಳಿ, ಮಿಂಚು.

**भ्रू** (ಸ್ತ್ರೀ.) ಹುಬ್ಬು.

**भ्लाष्** (೧ನೇ ಗ. ಆ.) ಹೊಳಿ, ಮಿಂಚು.

## म.

**मघवत्** (ಪು.) ಇಂದ್ರ.

**मङ्गल** (ನ.) ಕಲ್ಯಾಣ, ಘನತೆ; (ವಿ.) ಶುಭವಾದ, ಪವಿತ್ರವಾದ.

**मङ्गलकाल** (ಪು.) ಶುಭ ಮುಹೂರ್ತ.

**मङ्गलप्रदीप** (ಪು.) ಕಲ್ಯಾಣಕರವಾದ ದೀಪ.

**मञ्जु** (ವಿ.) ಇಂಪಾದ, ಸವಿ.

**मण्डन** (ನ.) ಭೂಷಿಸುವದು, ಅಲಂಕರಿಸುವದು, ಅಲಂಕಾರ.

**मण्डप** (ಪು.) ಹಂದರ.

**मण्डल** (ನ.) ವರ್ತುಲ, ಗೋಲ.

**मत** (ನ.) ಅಭಿಪ್ರಾಯ, ಉಪದೇಶ.

**मथिन्** (ಪು.) ಕಡೆಗೋಲು.

**मत्तः** (ಅ.) ನನ್ನ ದೆಸೆಯಿಂದ.

**मद्य** (ನ.) ಹೆಂಡ, ಸೆರೆ.

**मधुपर्क** (ಪು.) ಅತಿಥಿಗೆ ಸತ್ಕಾರಾರ್ಥವಾಗಿ ಅರ್ಪಣ ಮಾಡಿದ ಜೇನುತುಪ್ಪ ಮೊಸರು ಮುಂತಾದ ಪದಾರ್ಥಗಳು.

**मधुरम्** (ಅ.) ಇಂಪಾಗಿ.

**मधुलिह्** (ಪು.) ಗುಂಗೀಹುಳ.

**मध्यम** (ವಿ.) ನಡುವಿನ; (ನ.) ಸೊಂಟ, ನಡುವು.

**मध्याह्न** (ಪು.) ದಿವಸದ ನಡುಭಾಗ.

**मन्** (**अव** ಪೂರ್ವಕ) ಅಲಕ್ಷ್ಯಮಾಡು, ಜರಿಯು.

**मनस्विन्** (ವಿ.) ಬುದ್ಧಿವಂತ.

**मनुज** (ಪು.) ಮನುಷ್ಯ.

**मनुजन्मन्** (ಪು.) ಮನುವಿನ ವಂಶದವ, ಮನುಷ್ಯ.

**मनोरथ** (ಪು.) ಕೋರಿಕೆ, ಆಶೆ.

**मन्त्र्** (೧೦ನೇ ಗ. ಆ.) ಬೇರೆ ಜನರ ಕೂಡ ಆಲೋಚಿಸು, ಆಲೋಚನೆ ಕೇಳು, ವಿಚಾರಿಸು.

**मन्त्राक्षर** (ನ.) ವೇದವಚನದ ಅಕ್ಷರ.

**मन्थ्** (೯ನೇ ಗ. ಪ.) (ಮೊಸರು) ಕಡೆ.

**मन्दता** (ಸ್ತ್ರೀ.) ಜಾಡ್ಯ, ಸೋಮಾರಿತನ.

**मन्दभाग्यता** (ಸ್ತ್ರೀ.) ದುರ್ದೈವ.

**मय** (ಪು.) ರಾಕ್ಷಸರ ಬಡಿಗನ ಹೆಸರು.

**मयूख** (ಪು.) ಕಿರಣ.

**मराला** (ಸ್ತ್ರೀ.) ರಾಜಹಂಸಿ.

**मरुत्** (ಪು.) ದೇವತೆ.

**मरुत्त** (ಪು.) ಒಬ್ಬ ಅರಸನ ಹೆಸರು.

**मरुत्सुत** (ಪು.) ವಾಯುಪುತ್ರ, ರಾಮಚಂದ್ರನ ಕಡೆಯವನೊಬ್ಬ ವಾನರ ವೀರನು, ಪ್ರಾಣದೇವರು.

**मर्यादा** (ಸ್ತ್ರೀ.) ಹದ್ದು, ಮಟ್ಟು, ಮೇರೆ.

**मस्ज्** (೬ನೇ ಗ. ಪ.) ಮುಳುಗು.

**मस्तक** (ಪು. ನ.) ತಲೆ.

**महत्** (ನ.) ತೇಜ, ಕಳೆ, ದೊಡ್ಡಸ್ತಿಕೆ.

**महत्त्व** (ನ.) ದೊಡ್ಡಸ್ತಿಕೆ, ಪ್ರಭಾವ.

**महाज** (ಪು.) ದೊಡ್ಡ ಕುರಿ.

**महाजव** (ವಿ.) ಬಹಳ ವೇಗವುಳ್ಳ.

**महानुभाव** (ವಿ.) ದೊಡ್ಡ ಮನಸ್ಸಿನವ.

**महाभिषेक** (ಪು.) ದೊಡ್ಡ ಅಭಿಷೇಕ; **अभिषेक** (ಪು.) ಪಟ್ಟಗಟ್ಟುವ ಕಾಲಕ್ಕೆ ಅರಸನಿಗೆ ಹಾಕುವ ಸ್ನಾನ.

**महाराज** (ಪು.) ದೊಡ್ಡ ಅರಸು.

**महार्ह** (ವಿ.) ಬೆಲೆಯುಳ್ಳ, ಗುಣವುಳ್ಳ.

**महार्हशयनोचित** (ವಿ.) [**महार्हशयन** (ನ.) ಹಾಸಿಕೆ, **उचित** ಅಭ್ಯಾಸವುಳ್ಳ] ಬೆಲೆಯುಳ್ಳ ಹಾಸಿಕೆಯ ಮೇಲೆ ಮಲಗುವ ಅಭ್ಯಾಸವುಳ್ಳ.

**महाश्वेता** (ಸ್ತ್ರೀ.) ಒಬ್ಬ ಗಂಧರ್ವನ ಮಗಳ ಹೆಸರು.

**महोक्ष** (ಪು.) [**उक्षन्** (ಪು.) ಎತ್ತು ಹೋರಿ] ದೊಡ್ಡ ಹೋರಿ, ದೊಡ್ಡ ಎತ್ತು.

**महोदधि** (ಪು.) ಮಹಾಸಾಗರ.

**महोपकारिन्** (ವಿ.) ಬಹುಪರೋಪಕಾರಬುದ್ಧಿಯುಳ್ಳ.

**मा** (೨ನೇ ಗ. ಪ.) ಅಳಿ, ತೂಗು.

**मान** (ಪು.) ಮನ್ನಣೆ, ಆದರ, ಸ್ವಾಭಿಮಾನ, ಗರ್ವ, ಅಹಂಭಾವ.

**मानव** (ಪು.) ಮನುಷ್ಯ.

**मानवराक्षस** (ಪು.) ಮನುಷ್ಯರೂಪಿಯಾದ ರಾಕ್ಷಸ.

**मानुष्यक** (ನ.) ಮನುಷ್ಯಜಾತಿ.

**मानोन्नति** (ಸ್ತ್ರೀ.) [**मान** (ಪು.) ಮನ್ನಣೆ, **उन्नति** (ಸ್ತ್ರೀ.) ಹೆಚ್ಚಳ] ಮನ್ನಣೆಯ ಹೆಚ್ಚಳ, ಮಾನದ ಬೆಳವಣಿಗೆ.

**मामक** (ವಿ.) ನನ್ನ.

**माया** (ಸ್ತ್ರೀ.) ಮೋಸ, ಕಣ್ಣುಕಟ್ಟು.

**मारुत** (ಪು.) ಗಾಳಿ.

**मारुतात्मज** (ಪು.) ಗಾಳಿಯ ಮಗ, ಮಾರುತಿ, ಪ್ರಾಣದೇವರು.

**मालाकार** (ಪು.) ತೋಟಿಗ.

**मालिन्य** (ನ.) ಮಬ್ಬು, ಕತ್ತಲೆ, ಹೊಲಸು.

**माल्यवत्** (ಪು.) ಒಬ್ಬ ರಾಕ್ಷಸನ ಹೆಸರು, ರಾವಣನ ಸೋದರಮಾವ.

**मांस** (ನ.) **मांस** (ನ.) ಮಾಂಸ, ಖಂಡ.

**मास्** (ಪು.) ತಿಂಗಳು.
**मिथः** (ಅ.) ಪರಸ್ಪರ, ಒಬ್ಬರಿಗೊಬ್ಬರು ಕೂಡಿ, ತಮ್ಮತಮ್ಮೊಳಗೆ.
**मिथुन** (ನ.) ಜೋಡು.
**मिथ्या** (ಅ.) ಸುಳ್ಳೇ, ಸುಳ್ಳಾಗಿ.
**मी** (೯ನೇ ಗ. ಉಭ.) ಹಾಳು ಮಾಡು, ಕೆಡಿಸು.
**मुकुटज्योत्स्नाजल** (ನ.) [**मुकुट** (ನ.) ಕಿರೀಟ, **ज्योत्स्ना** (ಸ್ತ್ರೀ.) ಬೆಳದಿಂಗಳು] ಕಿರೀಟಗಳ ಕಾಂತಿ ಎಂಬ ನೀರು.
**मुक्तकेशी** (ಸ್ತ್ರೀ.) ಅಸ್ತವ್ಯಸ್ತವಾದ ಕೂದಲುಗಳುಳ್ಳವಳು, ಕೆದರಿದ ಕೂದಲುಳ್ಳವಳು.
**मुक्ता** (ಸ್ತ್ರೀ.), **मौक्तिक** (ನ.) ಮುತ್ತು.
**मुखरता** (ಸ್ತ್ರೀ.) ಹರಟೆಗಾರಿಕೆ, ವಾಚಾಲತನ.
**मुखोच्छ्वासगन्ध** (ಪು.) **उच्छ्वास** (ಪು.) ಉಸುರು; **गन्ध** (ಪು.) ವಾಸನೆ, ಪರಿಮಳ] ಬಾಯಿಯಿಂದ ಹೊರಬಿದ್ದ ಉಸುರಿನ ಸುವಾಸನೆ.
**मुग्धाकृति** (ವಿ.) ಸುಂದರಾಕಾರವುಳ್ಳ.
**मुर** (ಪು.) ವಿಷ್ಣುವಿನ ವೈರಿ, ಕೃಷ್ಣನ ಶತ್ರು.
**मुष्** (೯ನೇ ಗ. ಪ.) ಕದಿ.
**मुह्** (೪ನೇ ಗ. ಪ. **प्र** ಪೂರ್ವಕ) ಮೈಮರಿ, ಮೂರ್ಛೆ ಹೋಗು.
**मूकभाव** (ಪು.) ಮೂಕತನ, ಮೌನ.
**मूर्च्छ्** (೧ನೇ ಗ. ಪ.) ಕವಳಿ ಬರು, ಮೈಮರಿ.
**मूर्धन्** (ಪು.) ತಲೆ.
**मूल** (ನ.) ಬೇರು, ಬುಡ, ಆಧಾರ.
**मूषक** (ಪು.) ಇಲಿ; **मूषकराज** (ಪು.) ಇಲಿಗಳ ಅರಸು.
**मृग्** (೧೦ನೇ ಗ. ಆ.) ಹುಡುಕು, ಶೋಧಿಸು, ಕೋರು.
**मृगतृष्णिका** (ಪು.) ಬಿಸಿಲುಗುದುರೆ.
**मृगया** (ಸ್ತ್ರೀ.) ಬೇಟೆ.
**मृगानुसारिन्** (ವಿ.) ಜಿಂಕೆಯನ್ನು ಬೆನ್ನಟ್ಟುವ.
**मृज्** (೧ನೇ ಗ. ಪ., ೧೦ನೇ ಗ.) ಒರಸು, ತೊಳಿ, ಸಾಫು ಮಾಡು; **प्र+मृज्** ಒರಸಿ ತೆಗೆ; **सम्+मृज्** ಗುಡಿಸು, ಸ್ವಚ್ಛ ಮಾಡು.
**मृणाल** (ಪು. ನ.) ಕಮಲದ ದಂಟು.
**मृद्** (೯ನೇ ಗ. ಪ.) ಜಜ್ಜು, ಪುಡಿ ಮಾಡು.
**मृषा** (ಅ.) ವ್ಯರ್ಥವಾಗಿ, ಸುಳ್ಳಾಗಿ.
**मेखला** (ಸ್ತ್ರೀ.) ಪಟ್ಟಿ, ಒಡ್ಯಾಣ.
**मेध्य** (ವಿ.) (ಯಜ್ಞದಲ್ಲಿ) ಬಲಿ ಕೊಡತಕ್ಕ.
**मेनका** (ಸ್ತ್ರೀ.) ಒಬ್ಬ ಅಪ್ಸರೆಯ ಹೆಸರು.
**मैथिली** (ಸ್ತ್ರೀ.) ಮಿಥಿಲದ ಅರಸನ ಮಗಳು, ಸೀತೆ.
**मोह** (ಪು.) ಅವಿವೇಕತನ, ದಡ್ಡತನ, ತಿಳಿಗೇಡಿತನ.
**मौन** (ನ.) ಸುಮ್ಮನಿರುವದು.
**मौर्ख्य** (ನ.) ತಿಳಿಗೇಡಿತನ, ಬುದ್ಧಿಗೇಡಿತನ, ಹುಚ್ಚುತನ.
**म्ना** (೧ನೇ ಗ. ಪ.) ಆಲೋಚಿಸು, ಮನನ ಮಾಡು, ಅನ್ನು; **सम्+आ+म्ना** ಅನ್ನು, ಪಠಿಸು, ಪೂರ್ವಿಕರಿಂದ ಕರ್ಣಪರಂಪರೆಯಾಗಿ ಕೇಳಿದ್ದನ್ನು ಹೇಳು, ವಿಧಿಸು, ಕಟ್ಟುಮಾಡು.
**म्लेच्छ** (ಪು.) ಪರದೇಶಸ್ಥ.
**म्लै** (೧ನೇ ಗ. ಪ.) ದಣಿ, ಮೈಮರಿ, ಮಂದವಾಗು.

## **य**

**यजमान** (ಪು.) ಯಜ್ಞ ಮಾಡುವವ.
**यज्ञ** (ಪು.) ಯಜ್ಞ.
**यज्ञक्रतु** (ಪು.) ಯಜ್ಞಸಂಸ್ಕಾರದ ಒಂದು ಭಾಗ.
**यज्ञमण्डप** (ಪು.) ಯಜ್ಞಕ್ಕಾಗಿ ಹಾಕಿದ ಹಂದರ.
**यज्ञवर्मन्** (ಪು.) ಒಬ್ಬ ಮನುಷ್ಯನ ಹೆಸರು.
**यज्ञिय** (ವಿ.) ಯಜ್ಞದ.
**यत्** (**सम्** ಪೂರ್ವಕ) ಒದ್ದಾಡು, ಪ್ರಯತ್ನಿಸು, ಹೆಣಗು.

